# ಸಿದ್ಧಗಂಗಾ

ಸಂಪುಟ-33 ಸಂಚಿಕೆ-8 ಆಗಸ್ಟ್-1997



ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62 ಕೇಂದ್ರ ಕಛೇರಿ : { 72866
ಸಿ.ಎಸ್.ಟಿ. 73656288 } 70204

ವಿುನಿ ಬಜಾರ್: 351114

ವೀರಶೈವ ಸಹಕಾರಿ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009.

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.
ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1995-96 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 8.80 ಲಕ್ಷ
ಸರ್ಕಾರದಿಂದ ರೂ. 14-32 ಲಕ್ಷ
ಒಟ್ಟು ರೂ. 23.12 ಲಕ್ಷ

| | | |
|---|---|---|
| 1) ಸದಸ್ಯರ ಸಂಖ್ಯೆ | : | 5445 |
| 2) ಸಗಟು ಮತ್ತು ಚಿಲ್ಲರೆ ಮಾರಾಟ | : | ರೂ. 2507.07 ಲಕ್ಷ |
| 3) ಆಪದ್ಧನ | : | ರೂ. 16.47 ಲಕ್ಷ |
| 4) ಇತರೆ ನಿಧಿಗಳು | : | ರೂ. 24.93 ಲಕ್ಷ |
| 5) 1995-96 ರಲ್ಲಿ ನಿವ್ವಳ ಲಾಭ | : | ರೂ. 4.11 ಲಕ್ಷ |

ಸದಸ್ಯರಿಗೆ ಸೌಲಭ್ಯಗಳು :
ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಹಾಗೂ ಸೋಮೇಶ್ವರಪುರದಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗಳಿವೆ.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಕೆ. ಎಸ್. ಮಂಜುನಾಥ್
ಅಧ್ಯಕ್ಷರು
2) ಶ್ರೀ ಟಿ. ಎಂ. ಯೋಗೀಶ್
ಉಪಾಧ್ಯಕ್ಷರು
3) ಶ್ರೀ ಕೆ. ಎಸ್. ಶಿವಪ್ರಕಾಶ್
ಕಾರ್ಯನಿರ್ವಾಹಕರು
-: ನಿರ್ದೇಶಕರು :-
4) ಶ್ರೀ ಬಿ. ಎಸ್. ಪರಮಶಿವಯ್ಯ
5) ಶ್ರೀ ಎಲ್.ಎಸ್. ಕುಮಾರಸ್ವಾಮಿ
6) ಶ್ರೀ ಗುರುನಂಜಯ್ಯ
7) ಶ್ರೀ ಜಿ. ಶಿವಕುಮಾರ್
8) ಶ್ರೀ ಎಲ್. ರಾಜಪ್ಪ
9) ಶ್ರೀ ಹೆಚ್. ಎಸ್. ಶಿವಲಿಂಗಯ್ಯ
10) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿ
11) ಶ್ರೀ ಬಿ. ಜಿ. ನಾಗಬಸಪ್ಪ
12) ಶ್ರೀ ಮಹದೇವಪ್ಪ
13) ಶ್ರೀಮತಿ ಎನ್. ಗಿರಿಜ
14) ಶ್ರೀಮತಿ ಲೋಕಮಾತಾ ಶಿವಣ್ಣ ಸ.ನಾ.ನಿ.
15) ಶ್ರೀ ಟಿ. ಆರ್. ರಾಜಶೇಖರಯ್ಯ ಸ.ನಾ.ನಿ.
16) ಶ್ರೀ ಬಿ. ಟಿ. ಹೊರಕೇರಿ ಸ.ನಾ.ನಿ.
17) ಶ್ರೀ S.N. ಅನಂತಮೂರ್ತಿ ಬಿ.ಡಿ.ಸಿ.ಸಿ.ಪ್ರ.
18) ಶ್ರೀ ಎ. ಪ್ರಸನ್ನಕುಮಾರಸ್ವಾಮಿ
ಪ್ರಧಾನ ವ್ಯವಸ್ಥಾಪಕರು.

# ಸಿದ್ಧಗಂಗಾ

ಸಂಪುಟ-33 ಸಂಚಿಕೆ-8 ಆಗಸ್ಟ್-1997.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ರಸರೂಪಿ ನನಗುರುವೆ ಕಸದೊಳಗೆ ನಗುತಿರುವೆ
ರಸವೆ ನೀನಾಗಿರುವೆ ರಸಶಾಂತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❁ ❁ ❁

ಭಕ್ತಿ ಬುವಿ ಶ್ರೀಗುರುವೆ ಶಕ್ತಿ ಶ್ರೀ ಸಾಗರವೆ
ಮುಕ್ತಿ ಶ್ರೀ ಯಾಕಾಶ ಶ್ರೀ ತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❁ ❁ ❁

ಅಣುವ ಅಪ್ಪಿದ ತಂದೆ ಮಹವ ತಬ್ಬಿದ ಗುರುವೆ
ಗುಣರತ್ನ ಶ್ರೀ ಗಣಿಯೆ ಕರುಣಾಳೆ ॥ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

● ಹೆಚ್. ವಿ. ವೀರಭದ್ರಯ್ಯ

## ಶ್ರೀವಾಣಿ



**ದೃಷ್ಟಿ :**

ಇತ್ತೀಚೆಗೆ ಸಭೆ ಸಮಾರಂಭಗಳಲ್ಲಿ ಭಾಗವಹಿಸಿದಾಗ ಒಂದು ವಿಚಾರ ಗಮನಕ್ಕೆ ಬರುತ್ತಿದೆ. ರಾಜ್ಯದ ಆಡಳಿತ ಸೂತ್ರ ಹಿಡಿದಿರುವ ಸಚಿವರು, ಪಕ್ಷ ವಿಪಕ್ಷಗಳ ನಾಯಕರು ಚಿಂತನ ಶೀಲರೆನ್ನಿಸಿಕೊಂಡಿರುವ ಬುದ್ಧಿ ಜೀವಿಗಳು, ಅಧಿಕಾರ ನಡೆಸುತ್ತಿರುವ ಅಧಿಕಾರಿಗಳು, ಮಾತನಾಡುವುದನ್ನು ಲಕ್ಷ್ಯಕ್ಕೆ ತಂದು ಕೊಂಡಾಗ ವಿಷಾದವಾಗುತ್ತದೆ. ಎಲ್ಲರೂ ಹೀಗೆಂದಲ್ಲ. ಆದರೆ ಬಹುತೇಕ ಮುಖ್ಯರ ಚಿಂತನ ಮಾರ್ಗ ಅಖಂಡ ವಾದುದಾಗಿಲ್ಲವೆಂಬುದು ಹೊಳೆಯುತ್ತದೆ. ಕೇವಲ ತಮ್ಮ ವರ್ಗ, ಪಕ್ಷ, ಕ್ಷೇತ್ರ, ಪಂಗಡಗಳ ಅಭಿವೃದ್ಧಿಗಷ್ಟೇ ಅವರ ಆಲೋಚನಾ ಲಹರಿ ಹರಿದಿರುವುದನ್ನು ಕಾಣಬಹುದು ಒಬ್ಬ ಗೃಹಸ್ಥ ಕೇವಲ ತನ್ನ ಮಡದಿ ಮಕ್ಕಳ ಕ್ಷೇಮವನ್ನು ಮಾತ್ರ ಪರಿಗಣಿಸಬಾರದು. ಅಂತೆಯೇ ಒಬ್ಬ ಶಾಸಕ, ಸಚಿವ, ಅಧಿಕಾರಿ ಕೇವಲ ಒಂದು ಕ್ಷೇತ್ರ ಒಂದುವರ್ಗ, ಒಂದು ವಿಭಾಗದ ಪ್ರಗತಿಗಷ್ಟೇ ತಮ್ಮನ್ನು ಸೀಮಿತ ಮಾಡಿಕೊಳ್ಳಬಾರದು ಒಬ್ಬ ವ್ಯಕ್ತಿ ತನ್ನ ದೇಹದ ಮೇಲೆ ಸರ್ವಾಂಗಗಳನ್ನು ಕಾಪಾಡಿಕೊಂಡು, ಅವುಗಳ ಸದುಪಯೋಗಪಡೆದು ಕೊಂಡಾಗ ತಾನೆ ವ್ಯಕ್ತಿ ವಿಕಾಸ. ಅದು ಬಿಟ್ಟು ತಲೆಯೊಂದನ್ನಾಗಲೀ ಕಾಲೊಂದನ್ನಾಗಲೀ ಬಲಗೊಳಿಸುವುದಾದರೆ ಏನಾಗುತ್ತದೆ. ಒಬ್ಬ ಶಾಸಕ ಕೇವಲ ತನ್ನನ್ನು ಮತ ಕೊಟ್ಟು ಜಯಶೀಲನ್ನಾಗಿಸಿದವರಿಗೆ ಮಾತ್ರ ಶಾಸಕನಲ್ಲ. ಇಡೀ ಒಂದು ಕ್ಷೇತ್ರದ ಶಾಸಕ, ಅಂತೆಯೇ ಒಬ್ಬ ಸಚಿವ ಕೇವಲ ಒಂದು ವರ್ಗದಮುಂದುವರಿದ ಅಥವಾ ಹಿಂದುಳಿದ ಅಥವಾ ಪರಿಶಿಷ್ಟದ ಸಚಿವನಾಗಬಾರದು. ಇಡೀ ಜನಸಮುದಾಯದ ಕಲ್ಯಾಣದ ಬಗ್ಗೆ ಚಿಂತಿಸಬೇಕು "ಇವನಾರವ, ಇವನಾರವ ಇವನಾರವನೆನ್ನದೆ, ಇವನಮ್ಮವ, ಇವನಮ್ಮವ, ಇವನಮ್ಮವನೆನ್ನುವ" ವಿಶಾಲ ದೃಷ್ಟಿಯಿರಬೇಕು. ದೃಷ್ಟಿಯಂತೆ ಸೃಷ್ಟಿತಾನೆ? ನಮ್ಮ ದೃಷಿ ದೊಡ್ಡದಾಗದ ತನಕ ನಾವು ದೊಡ್ಡವರಾಗಲಾರೆವಲ್ಲವೆ? ಹಿಂದೆ ರಾಜ ಮಹಾರಾಜರುಗಳು ಯಾವ ಧರ್ಮದವರಾಗಿದ್ದರೂ ಸಹ ಎಲ್ಲ ಧರ್ಮದವರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ ದೃಷ್ಟಿಯವರಾಗಿದ್ದ ಉದಾಹರಣೆಗಳು ನಮ್ಮ ಮುಂದಿಲ್ಲವೆ? ದೃಷ್ಟಿ ವಿಶಾಲವಾಗಿ ಚಿಂತನೆಗಳೆಲ್ಲ ಜನ ಮುಖಿಯಾಗುವಲ್ಲಿ ಆನಂದವಿದೆ.

## ಸಿದ್ಧಗಂಗೆಯ ಸಿದ್ಧಿಪುರುಷ

ಡಾ. ಕೆ. ಆರ್. ಸಂಧ್ಯಾರೆಡ್ಡಿ

ಚಿನ್ನದಲಿ ಪೋಣಿಸಿದ ರುದ್ರಾಕ್ಷಿ ಮಾಲೆಗಳ
ಜರತಾರಿಯಂಚಿನ ಕಾಷಾಯ ವಸನದ
ಚಿನ್ನದ ಕಿರೀಟ ಬೆಳ್ಳಿಮಣೆಯ ಮೇಲೆ
ಕಾಲಿಟ್ಟು ವಿಜೃಂಭಿಸುವ, ರತ್ನಪಲ್ಲಕ್ಕಿಗಳಲ್ಲಿ ಅಡ್ಡಾಡುವ
ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಗಳಾದ
ವಿರಕ್ತ ಮಠಾಧೀಶ ನೀವಲ್ಲ.

ನಿಮ್ಮ ಹೆಸರಿನಲಿಲ್ಲ
ಬಿರುದು ಬಾವಲಿಗಳ ಭಾರ
ಕಣ್ಣು ಮುಚ್ಚಿದ ಭಕ್ತಗಣಕೆ
ಮಂಕು ಬೂದಿಯನೆರಚಿ
ಬೆಳಸಿಕೊಂಡವರಲ್ಲ ನಿಮ್ಮ ಹೆಸರ
ಸಹಸ್ರ ಸಹಸ್ರ ಹಸಿದ ಹೊಟ್ಟೆಗಳಿಗೆ
ಅನ್ನವಿಕ್ಕಿದ ಬರಿಗೈಯಸರದಾರ
ಅಕ್ಷರ ಸಾಮ್ರಾಜ್ಯ ಕಟ್ಟಿಬೆಳಸಿದ
ಶೂನ್ಯ ಸಿಂಹಾಸನ ಧೀರ

ಜಾತಿಜಾತಿಯ ಭೇದ ಗಂಡು ಹೆಣ್ಣಿನ ಭೇದ
ಬಡವ ಬಲ್ಲಿದ ಭೇದ
ಯಾವ ಭೇಧವೆಣಿಸದೆ
ಸಕಲ ಜೀವಾತ್ಮರನು ಒಂದಾಗಿ ಕಾಣುವ
ಆ ಸೂರ್ಯ ಈ ಚಂದ್ರ
ಆ ಗಾಳಿ ಈ ನೀರು ಇವುಗಳಂತೆಯೇ
ಎಲ್ಲರಿಗೂ ಲಭ್ಯವಾಗುವ
ಸಿದ್ಧಗಂಗೆಯ ಸಿದ್ಧಿಪುರುಷ
ನಿಮ್ಮ ಪದತಲಕೆ
ನಮ್ಮ ಕೋಟಿಶರಣು

(ಕೃಪೆ: ದಾಸೋಹ ಸಿರಿ)

## ಶ್ರೀ ಸಿದ್ಧಲಿಂಗೇಶ್ವರ ವಚನ



ಕತ್ತೆಗೇಕಯ್ಯಾ ಕಡಿವಾಣ, ತೊತ್ತಿಗೆ ತೋಳ ಬಂದಿಯೇ ಕಯ್ಯಾ?
ಶ್ವಾನಗೇಕೆ ಆನೆಯ ಚೋಹವಯ್ಯಾ ?
ಹಂದೆಗೇಕೆ ಚಂದ್ರಾಯುಧವಯ್ಯಾ ?
ಶಿವನಿಷ್ಠೆಯಿಲ್ಲದವಂಗೆ
ವಿಭೂತಿ, ರುದ್ರಾಕಿ, ಶಿವಮಂತ್ರ, ಶಿವಲಿಂಗವೆಂಬ
ಶಿವ ಚೋಹವೇತಕಯ್ಯಾ ಇವರಿಗೆ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ ?

ವಿಭೂತಿ, ರುದಾಕ್ಷಿ, ಶಿವಮಂತ್ರ ಹಾಗೂ ಶಿವಲಿಂಗ ಈ ಶಿವಲಾಂಛನಗಳನ್ನು ಧರಿಸುವ ವ್ಯಕ್ತಿಗಳು ಶಿವಭಕ್ತಿಯುಳ್ಳವರಾಗಲೇಬೇಕು. ಶಿವಭಕ್ತಿಯಿಲ್ಲದೆ ಇವನ್ನು ಧರಿಸಿದರೆ ಕತ್ತೆಯು ಕಡಿವಾಣವನು, ನಾಯಿಯು ಆನೆಯ ವೇಷವನ್ನು, ಹೇಡಿಯು ಚಂದ್ರಾಯುಧವನ್ನು ಧರಿಸಿದಂತೆ ಹಾಸ್ಯಕ್ಕೆ ಗುರಿಯಾಗಬೇಕಾಗುವುದು. ಯಾವ ಲಾಂಛನವನ್ನು ಯಾರು ಧರಿಸುವರೋ ಅವರು ಆದಕ್ಕನುಗುಣವಾಗಿದ್ದರಲ್ಲವೇ ಆ ಲಾಂಛನಕ್ಕೆ ಶೋಭೆ ಬರುವುದು ಅಂತೆಯೇ ಬಸವಣ್ಣನವರು ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಛೀಎಂಬೆ ಎಂದು ಉದ್ಗಾರ ತೆಗೆದಿರುವರು. ಲಾಂಛನವು ವ್ಯಕ್ತಿಗೆ ತಕ್ಕ ಪ್ರೇರಣೆಯನ್ನುಂಟು ಮಾಡುವುದು.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ- ಶ್ರೀ ತೋಂ.ಸಿ.ಕೈಂ. ಸೇವಾಸಂಘ, ಎಡೆಯೂರು ಗದಗ )

## ಸಿದ್ಧಗಂಗಾ ಮಾಸ ಪತ್ರಿಕೆ

ಸಂಪಾದಕ ಮಂಡಳಿ

ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು.

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

ಎಂ. ರೇಣುಕಾರಾಧ್ಯ
ಸಹ ಸಂಪಾದಕರು

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಸಲಹಾ ಸಮಿತಿ

ಡಾ॥ ಎಂ. ಎನ್. ಚನ್ನಬಸಪ್ಪ
ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಹೆಚ್. ಎಸ್. ಸಿದ್ಧಗಂಗಪ್ಪ
ಪಿ. ಎನ್. ಚಂದ್ರಶೇಖರಯ

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ
ಮುದ್ರಕರು

* *

ಶ್ರೀಸಿದ್ಧಗಂಗಾಕ್ಷೇತ್ರ
ಪ್ರಕಟಣೆಯುಸ

### ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ವರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00


# ಸಂಪಾದಕೀಯ

## ಪವಾಡ ನಡೆಯಿತು-4

ಶ್ರೀಮಠದ ಇತಿಹಾಸದಲ್ಲಿ ಮಹತ್ವಪೂರ್ಣ ಸಮಾರಂಭ ನಡೆಯಿತು. ಮಾರ್ಚಿ 22, 23 ಮತ್ತು 24 ರಂದು ವಜ್ರಮಹೋತ್ಸವ. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಾಹಾಸ್ವಾಮಿಗಳು ಶ್ರೀ ಮಠಕ್ಕಾಗಿ ವಿರಕ್ತಾಶ್ರಮ ದೀಕ್ಷೆ ಸ್ವೀಕರಿಸಿ ಸೇವಾ ವ್ರತವನ್ನು ನಡೆಸಿಕೊಂಡು ಬಂದ ಸವಿ ನೆನಪಿಗಾಗಿ ವಜ್ರಮಹೋತ್ಸವ ನಡೆಯಿತು. ಶ್ರೀಗಳವರು ಅರವತ್ತಾರು ವರ್ಷಗಳಷ್ಟು ದೀರ್ಘಕಾಲ ಹಮ್ಮಿಕೊಂಡ ತ್ರಿವಿಧ ದಾಸೋಹ ನಾಡಿನ ಗಮನ ಸೆಳೆದದ್ದು ಸಹಜ ಸ್ವಾಭಾವಿಕವಾಗಿತ್ತು.

ಮೂರುದಿನಗಳು ನಡೆದ ಸಮಾರಂಭ ಜನಸಾಗರದ ಭಕ್ತಿ ಗಂಗೆಯನ್ನು ದರ್ಶನ ಮಾಡಿಸಿತು. ಜನಶಕ್ತಿಯ ಅದ್ಭುತ ಕ್ರಿಯಾಮುಖವನ್ನು ಪರಿಚಯಿಸಿತು. ಸಮಾರಂಭದ ಅಂಗವಾಗಿ ಧಾರ್ಮಿಕ ಗೋಷ್ಠಿ, ಮಹಿಳಾ ಗೋಷ್ಠಿ, ಶಿವಾನುಭವಗೋಷ್ಠಿ ಸಂಸ್ಕೃತ ಕಾಲೇಜಿನ ಅಮೃತ ಮಹೋತ್ಸವ, ರೈತ ಸಮ್ಮೇಳನಗಳನ್ನು. ಸಂಯೋಜಿಸಲಾಗಿತ್ತು.

ದಿನಾಂಕ 23.3.97 ರಂದು 2-30 ಘಂಟೆಗೆ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವಿರೇಂದ್ರಹೆಗ್ಗಡೆಯವರ ನೇತೃತ್ವದಲ್ಲಿ ಮಹಿಳಾ ಗೋಷ್ಠಿಯನ್ನು ಹಮ್ಮಿಕೊಳ್ಳಲಾಗಿತ್ತು. ರಾಜ್ಯದ ಪ್ರವಾಸೋದ್ಯಮ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ರಾಜ್ಯ ಸಚಿವರಾದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಗೋಷ್ಠಿಯನ್ನು ಉದ್ಘಾಟಿಸುತ್ತ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು ಸಮಾಜದ ಮಹಾಭಾಗ್ಯವಾಗಿದ್ದಾರೆ, ಅವರು ನಡೆಸಿರುವ ತ್ರಿವಿಧ ದಾಸೋಹ ಸೇವೆ ಅನುಪಮವಾಗಿದೆ, ಹನ್ನೆರಡನೆಯ ಶತಮಾನದ ಬಸವಾದಿಶರಣರ ಕಲ್ಯಾಣವನ್ನು ಪುನರ್ ನಿರ್ಮಾಣ ಮಾಡಿದ್ದಾರೆ. ಜಾತ್ಯತೀತ ಸಂಸ್ಥೆಯನ್ನಾಗಿ ಶ್ರೀ ಮಠವನ್ನು ಬೆಳೆಸಿದ್ದಾರೆ, ಶ್ರೀಗಳವರ ಆಶೀರ್ವಾದ ನಮ್ಮೆಲ್ಲರನ್ನು ಕಾಪಾಡಲಿ ಎಂದು ನುಡಿದರು.

ರಾಜ್ಯದ ಮಹಿಳಾ ಮಕ್ಕಳ ಕಲ್ಯಾಣ ರಾಜ್ಯ ಸಚಿವರಾದ ಶ್ರೀಮತಿ ವಿಮಲಾಬಾಯಿ ಜಗದೇವರಾವ್ ದೇಶ್ ಮುಖ್ ಅವರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ಶ್ರೀ ಶ್ರೀಗಳವರ ಸಾಧನೆ ಇಪ್ಪತ್ತನೆಯ ಶತಮಾನದ ಅದ್ಭುತವೆನ್ನಬೇಕು ಎಂದು ಭಕ್ತಿ ಸಮರ್ಪಣೆ ಮಾಡಿದರು. ವಿಧಾನ ಪರಿಷತ್ತಿನ ಉಪಸಭಾಪತಿಗಳಾದ ಶ್ರೀಮತಿ ರಾಣಿ ಸತೀಶ್ ಅವರು ಶ್ರೀಗಳವರು ನಡೆಸಿರುವ ಸೇವಾಮಣಿಹ ಆದರ್ಶಪೂರ್ಣವಾಗಿದೆ; ಅನುಕರಣೀಯವಾಗಿದೆ ಎಂದರು. ಗೋಷ್ಠಿಯಲ್ಲಿ ಅತ್ತಿಮಬ್ಬೆ ಪ್ರತಿಷ್ಠಾನದ ನಿರ್ದೇಶಕರಾದ ಶ್ರೀಮತಿ ಮನೋಹರಿ ಪಾರ್ಥಸಾರಥಿ, ಶಾಸಕರಾದ ಶ್ರೀಮತಿ ಪ್ರಮೀಳ ನೇಸರ್ಗಿ, ಪ್ರಾಧ್ಯಾಪಕರಾದ ಡಾ. ಗಂಗಮ್ಮ ಸತ್ಯಂಪೇಟೆ ಅವರು ಮಹಿಳೆಯರನ್ನು ಕುರಿತು ಮಾತನಾಡಿದರು. ನೇತೃತ್ವವನ್ನು ವಹಿಸಿದ್ದ ವೀರೇಂದ್ರ ಹೆಗ್ಗಡೆಯವರು ಧರ್ಮಸ್ಥಳಕ್ಕೂ ಸಿದ್ಧಗಂಗಾ ಮಠಕ್ಕೂ ಬೆಳೆದು ಬಂದಿರುವ ಪವಿತ್ರ ಬಾಂಧವ್ಯವನ್ನು ಸ್ಮರಿಸುತ್ತ, ಶ್ರೀ ಶ್ರೀಗಳವರ ಅಗಾಧ ವ್ಯಕ್ತಿತ್ವವನ್ನು ಪ್ರಾಂಜಲ ಮನಸ್ಸಿನಿಂದ ಪ್ರಶಂಸಿದರಲ್ಲದೆ ಭಕ್ತಿಗೌರವಗಳನ್ನು ಅರ್ಪಿಸಿದರು. ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.

## " ಶತಮಾನಂ ಭವ "

ಹೆಚ್. ಗಂಗಾಧರನ್, ಪ್ರಾಂಶುಪಾಲರು. ಜೆ.ಎಸ್.ಎಸ್. ಕಾನೂನು ಕಾಲೇಜು,
ಮೈಸೂರು.

ಗಿರಿಯಮೇಲಣ ಶಿಲೆಯಿಂ ಜಲವ ಬರಿಸಿ
ಗುರುಪೂಜೆಗಂ ಜಲವನೇ ತೈಲವಾಗಿರಿಸಿ
ಪರತತ್ವದಮೃತಧಾರೆಯನು ಹರಿಸಿ
ಗುರುಸಿದ್ಧೇಶ್ವರರು ತಪಗೈದರಲ್ಲಿ ತಾ ನೆಲೆಸಿ

ಪರಹಿತಕೃತಿಯೊಳು ನಿತ್ಯವಾಗುಳಿದವರು
ಚರಿತೆಯಲಿ ಚಿರ ಪರಿಚಿತರಾಗಿಹರಿವರು
ವರ ಗುರು ಸಿದ್ಧೇಶ್ವರರು ಅಟವೀಶ್ವರರು
ಆರಾರಿಗೂ ತೋರದಂತೆ ತಪಗೃದರಿನಿತರು

ಸಾಧಕರಿಗೆ ಸಿದ್ಧಿದೊರೆತಿಹ ಪುಣ್ಯದ ಗಿರಿ
ಶೋಧಕರಿಗೆ ಆತ್ಮದರ್ಶನವಿತ್ತ ವನಸಿರಿ
ಭೋಧಕರಿಗೆ ಭಾಗ್ಯವನಿತ್ತ ಜ್ಞಾನಸಿರಿ
ಸಿದ್ಧಪುರುಷರು ಮೆರೆದ ತಾಣ ಸಿದ್ಧಗಿರಿ

ಗುರು ಅಟವೀಶರ ಕಾರುಣ್ಯಶಿಶು ಉದ್ದಾನಶಿವಯೋಗಿ
ಪರಮ ನಿರಂಜನ ಪ್ರಣವಸ್ವರೂಪಿ ಸ್ವರಯೋಗಿ
ಗುರು ನಿನ್ನ ಕರಕಮಲದಲಿ ಕೇಳಿ ಅರಳಿದ ತ್ಯಾಗಿ
ಶರಣತತ್ವವೆ ರೂಪವೆತ್ತಿದ ಶಿವಕುಮಾರ ಮಹಾಯೋಗಿ

ಜ್ಞಾನದಾನದ ಬೆಳಕ ಜಗಕೆ ಬಿತ್ತರಿಸಿದ ಗುರುವೆ
ಅನ್ನದಾನದಿಂ ದೀನರುದ್ಧರಿಸ ಬಂದಿರುವೆ
ಅನವರತ ಅವನಿಯುದ್ಧಾರದ ತಪಗೈಯ್ಯುತಿರುವೆ
ಎನಿತೋ ಲಕ್ಷಮನೆಯ ಅಕ್ಷಯದ ಬೆಳಕಾಗಿರುವೆ

ಸಿದ್ಧಗಂಗಾ ಜ್ಞಾನಗಂಗೆ ಹರಿದಿಹಳು ದಶದಿಶೆಗಳಲಿ
ಉದ್ಧಾನಶಿವಯೋಗಿಗಳ ಕೃಪಾಶೀರ್ವಾದಬಲದಲಿ
ಸಿದ್ಧಿಪಡೆದ ಸದ್ಗುರು ನೀವಹುದು ಇಹದಲಿ
ಚಿದ್ಘನ ಗುರುವೇ ತಾಂ ಶತಮಾನ ಬಾಳಿಬೆಳಗಲಿ.

## ಬಸವಣ್ಣನವರು ಮಾಡಿದ ವೈಚಾರಿಕ ಕ್ರಾಂತಿ

❁ ಶ್ರೀ ನಾಗೇಶ ನಿಲುಗಲ್, ಕಂದಗಲ್, ಹುನಗುಂದ ತಾ.

ಧರ್ಮವು ಜಾತಿಯಾಗಿ ಮಾರ್ಪಟ್ಟಾಗ ಸ್ವಾರ್ಥನಿಂದೆಗಳು ಬೆಳೆಯುತ್ತವೆ. ಅಜ್ಞಾನವು ತಾಂಡವಾಡುವಾಗ ಮಾನವ ದಾನವನಾಗುತ್ತಾನೆ. ಆಚಾರವು ಅನಾಚಾರವಾದರೆ ಅಸುರಿ ಭಾವನೆಗಳು ಬೆಳೆಯುತ್ತವೆ. ಅಂದು ಹೀಗೆ ಸಮಾಜದ ಸ್ವಾಥ್ಯ ದಿನೇ ದಿನೇ ಹದಗೆಡುತ್ತಲಿದ್ದಾಗ ಅಣ್ಣ ಬಸವಣ್ಣನವರು ಅವತಾರಪುರುಷರಾಗಿ ಉದಯಿಸಿ ಬಂದರು. ಧರ್ಮದ ಜಾಗೃತಿಯನ್ನುಂಟು ಮಾಡಿದರು. ಮಾನವತೆಯನ್ನು ಎತ್ತಿ ಹಿಡಿದರು. ಸಮಗ್ರ ಮಾನವ ಕಲ್ಯಾಣವೆ ಅವರ ಗುರಿಯಾಗಿತ್ತು. ಸುಖಿ ಸಮಾಜ ಕಟ್ಟಿ ಜನರಲ್ಲಿ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಸಮಾನತೆಯನ್ನು ಸಾಧಿಸಬೇಕೆಂಬ ಮಹೋದ್ದೇಶವನ್ನು ಹೊಂದಿ ಕಾರ್ಯಪ್ರವೃತ್ತರಾಗಿ ಹಗಲಿರುಳು ಚಿಂತಿಸಿ ಸಫಲತೆಯನ್ನು ಸಾಧಿಸಿದರು. ಸಕಲ ಜೀವಿರಾಶಿಗಳಿಗೂ ಲೇಸನ್ನು ಬಯಸಿ ಸ್ತ್ರೀಸಮಾನತೆ ಅಂತರ್ಜಾತೀಯ ಸಂಬಂಧ, ಕಾಯಕ ತತ್ವ ಮೊದಲಾದ ಉದಾತ್ತ ತತ್ವಗಳನ್ನೊಳಗೊಂಡು ಎಲ್ಲಾ ವರ್ಗದ ಪಂಗಡದ, ಜನಗಳಿಗೆ ಪ್ರಜಾಪ್ರಭುತ್ವದ ಮೂಲ ತತ್ವಗಳ ತಳಹದಿ ಮೇಲೆ ಅನುಭವ ಮಂಟಪದ ಮೂಲಕ ಆಶ್ರಯ ನೀಡಿದರು-

ಸಮಾಜದ ಸರ್ವರಂಗದಲ್ಲಿ ವಿಚಾರ ಕ್ರಾಂತಿಗೈದ ಬಸವಣ್ಣನವರು ಹೊಸ ಸಮಾಜದ ರಚನೆಗೆ ರೂವಾರಿಯಾದರು. ಜಿಡ್ಡುಗಟ್ಟಿದ ಗೊಡ್ಡು ಸಂಪ್ರದಾಯಗಳನ್ನು ತನ್ನ ಕ್ರಾಂತಿಕಾರಿ ವಿಚಾರಗಳಿಂದ ಉಜ್ಜಿ ಸಮಾಜಕ್ಕೆ ಹೊಸ ಹೊಳಪನ್ನು ಕೊಟ್ಟರು. ಸಮಾಜವನ್ನು ಶುದ್ಧೀಕರಿಸಿ ನವಸಮಾಜ ಕಟ್ಟಿದ ಬಸವಣ್ಣನವರ ಘನ ಉದ್ದೇಶ ಸಮಾಜ ಬದುಕಬೇಕೆನ್ನುವುದು. ಅದುಬದಕಲು ಬೇಕಾಗುವಂತಹ ಪರಿಸರ ಸನ್ನಿವೇಶ, ಸಾಮುಗ್ರಿಗಳನ್ನು ಅಣ್ಣ ಸಮಾಜಕ್ಕೆ ಒದಗಿಸಿದ ಅಂಥ ಹಲವಾರು ವಿಚಾರಗಳಲ್ಲಿ ಅವರ ಸಾಮಾಜಿಕ, ವೈಚಾರಿಕ ಕ್ರಾಂತಿಯು ಒಂದು.

ಬಸವಣ್ಣನವರು ದಯೆ, ಧರ್ಮ, ವಿಶ್ವಬಂಧುತ್ವ, ವಿಶಾಲಭಾವನೆಯ ಹಿನ್ನಲೆಯಲ್ಲಿ ಮಾನವ ಸಮಾಜ ಕಟ್ಟಲು ಯತ್ನಿಸಿದರು. ಅದಕ್ಕಾಗಿ ವಿಚಾರಕ್ರಾಂತಿಗೈದರು. "ದಯವೇ ಧರ್ಮದ ಮೂಲವೆಂದು" ನಿಜಧರ್ಮದ ಮೂಲವನ್ನು ತಿಳಿಸಿದರು. ಆಡಂಭರಕ್ಕಿಂತ ಅಂತರಂಗದ ಶುದ್ಧಿಗೆ ಜಪ ತಪಗಳಿಗಿಂತ ನಿಶ್ಚಲ ಭಕ್ತಿಗೆ ಭಗವಂತನೊಲುಮೆ ಯಾಗುವದೆಂದೂ "ಸತ್ಯ ನುಡಿಯುವದೇ ದೇವಲೋಕ ಮಿಥ್ಯ ನುಡಿಯುವುದೇ ಮರ್ತ್ಯಲೋಕ" ಆಚಾರವೇ ಸ್ವರ್ಗ, ಅನಾಚಾರವೇ ನರಕ" ಎಂದು ಬೋಧಿಸಿ ಇಹಪರಗಳೆರಡರ ಅಂತರವನ್ನು ಹೋಗಲಾಡಿಸಿದರು. ಒತ್ತುವತೊರೆ ಒಣಗುವ ಮರ ಪ್ರಸಂಗ ಬಂದರೆ ಮಾರುವ ದೇವರ ಮೂರ್ತಿಗಳು ದೇವರಲ್ಲ ಎಂದು ಒತ್ತಿ ಹೇಳಿದರು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಎಂದು ಅರುವಿ, ಸಂಸಾರದಲ್ಲಿದ್ದುಕೊಂಡು ಸದ್ಗತಿ ದೂರಕಿಸಿಕೊಳ್ಳುವ ಸುವರ್ಣ ಮಾರ್ಗ ತೋರಿಸಿದರು. "ಸದುವಿನಯವೆ ಸದಾಶಿವ

ನೊಲಮೆ" ಎಂದು ಸಾರಿ ಮೇಲು ಕೀಳು ಎನ್ನದೇ ಸರ್ವರಿಗೂ ಧರ್ಮದ ಬಾಗಿಲನ್ನು ತೆರೆದಿಟ್ಟರು. ಬಸವಣ್ಣನವರ ಧಾರ್ಮಿಕ ವಿವೇಚನೆಯಲ್ಲಿ ಅವರ ಅಂದಶ್ರದ್ಧೆಗೆ ಎಂದೂ ಅವಕಾಶಕೊಟ್ಟವರಲ್ಲ. ನೇರವಾಗಿ ತಮ್ಮ ಅರಿವಿಗೆ ಮತ್ತು ಅನುಭವಕ್ಕೆ ಬಾರದ ಹೊರತು ಅವರ ಮನ ಒಪ್ಪುತ್ತಿರಲಿಲ್ಲ ಧರ್ಮದ ಹೆಸರಿನಲ್ಲಿ ಬೆಳೆದು ಬಂದಿರುವ ವ್ಯರ್ಥ. ಆಚಾರಗಳನ್ನು ಕಟುವಾಗಿ ಖಂಡಿಸಿದ್ದಾರೆ. ಯಾವುದನ್ನು ನುಡಿಯಲ್ಲಿ ಹೇಳಿದರೋ ಅದನ್ನು ನಡೆಯಲ್ಲಿ ತಂದು ತೋರಿಸಿದರು. ಜನಸಾಮಾನ್ಯರಲ್ಲಿ ಬೇರೂರಿದ್ದ ಅಂಧ ಶ್ರದ್ಧೆಯನ್ನು ತೊಡಕನ್ನು ಕಿತ್ತೆಸೆಯಲು ಬಸವಣ್ಣನವರು ಅತ್ಯಂತ ಯಶಸ್ವಿಯಾದರು. ಸಾವಿರಾರು ದೇವರುಗಳ ಜಂಜಾಟದ ಹೊರೆಯನಿಳಿಸಿ "ಇಬ್ಬರು ಮೂವರು ದೇವರೆಂದುಬ್ಬಿಬ್ಬಿ ಮಾತನಾಡಬೇಡ ಒಬ್ಬನೇ ದೇವರು ಕಾಣಿರೋ ಎಂದು ಹೇಳಿ ಏಕದೇವೊ ಪಾಸನೆಯ ಕಡೆಗೆ ಮನಸ್ಸೆಳೆದರು. ಸಮಾಜದ ಕುರುಡು ನಂಬಿಕೆಯುಳ್ಳ ಜನರ ಬಳಕೆಯ ಮಾರೆಮ್ಮ ಕರೆಮ್ಮ, ಕಾಳಮ್ಮ ಹಾಗೂ ಭರಮಪ್ಪ ಮೊದಲಾದ ತಾಮಸ ದೈವಗಳನ್ನು ಬಸವಣ್ಣನವರು ಬಲವಾಗಿ ಖಂಡಿಸಿದರು.

ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೋ
ಮಾರಿ ಎಂಬುದೇನೋ ?
ಕಂಗಳು ತಪ್ಪಿನೋಡಿದರೆ ಮಾರಿ
ನಮ್ಮ ಕೂಡಲಸಂಗಯ್ಯನ ನೆನಹ ಮರೆದರೆ ಮಾರಿ ಎಂದು
ಮಾರಿಯನ್ನು ಅರ್ಥೈಸಿದ್ದಾರೆ,

ಹೀಗೆ ಮೂಢನಂಬಿಕೆಗಳಿಗೆ ಬಲಿಯಾದ ಜನ ಅನೇಕ ವಿಧವಾಗಿ ಮೋಸ ಹೋಗುತ್ತಾರೆ. ದೆವ್ವಗಳ ಬಿಡಿಸುವ ನೆಪದಲ್ಲಿ ನಿಧಿ ತೋರಿಸುತ್ತೇವೆ ಎಂದು ಮೋಸ ಮಾಡುವುದು. ಬೆತ್ತಲೆಸೇವೆ, ದೇವದಾಸಿ ಬಿಡುವುದು, ದೇವರ ಹೆಸರಿನಲ್ಲಿ ಭಿಕ್ಷೆಬೇಡುವದೂ ಹೀಗೆ ಹಲವು ಬಗೆಯಾಗಿ ವಂಚಿಸುವ ಜನರು ಯಾವ ಕಾಲಕ್ಕೂ ಕಾಣಸಿಗುತ್ತಾರೆ. ದೇವರ ಹೆಸರಿನಲ್ಲಿ ನಡೆಯುವ ಅವ್ಯವಹಾರ-ಅನ್ಯಾಯುಗಳನ್ನು ತಪ್ಪಿಸುವುದರ ಸಲುವಾಗಿ ಪೂಜಾರಿಗಳ ಕಪಿಮುಷ್ಠಿಯಲ್ಲಿ ಒದ್ದಾಡುವ ಭಕ್ತರನ್ನು ಕಂಡು ತನ್ನಲ್ಲಿಯೇ ದೇವರು ಕಾಣುವ ಆಧ್ಯಾತ್ಮದ ಉದಾತ್ತ ತತ್ವಗಳನ್ನು ಆಚರಣೆಯಲ್ಲಿ ತಂದು ತೋರಿಸಿದರು. ಬಸವಣ್ಣನವರು ಧಾರ್ಮಿಕ ರಂಗದಲ್ಲಿ ದೇವರು-ಭಕ್ತರ ನಡುವೆಯ ಶೋಷಣೆಯನ್ನು ತಪ್ಪಿಸಿದರು. ಹಿಂಸೆಯನ್ನು ಯಾವದೇ ಕಾರಣಕ್ಕಾಗಲಿ ಅವರು ಒಪ್ಪಲಿಲ್ಲ. ಜಗವೆಲ್ಲಾ ಪರಮಾತ್ಮನೆ ಆಗಿರುವಾಗ ಅದು ಆತ್ಮಹಿಂಸೆಯಾಗುತ್ತದೆ ಎಂದು ತಿಳಿಸಿದರು. "ಒಬ್ಬರ ಮನನೋಯಿಸಿ ಒಬ್ಬರ ಮನೆಯ ಘಾತಮಾಡಿ ಗಂಗೆಯಲ್ಲಿ ಮುಳುಗಿದರೆ ಆಗುವದೇನಯ್ಯ" ಎಂಬಲ್ಲಿ ಅಹಿಂಸೆಯ ಮಹತ್ವವನ್ನು "ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದಲಿಂಗ ಘಟಸರ್ಪನಂತೆ" ಎನ್ನುವಲ್ಲಿ ಸತ್ಯ ಮಹತ್ವವನ್ನು ಎತ್ತಿ ತೋರಿಸಿದ್ದಾರೆ. ಹೀಗೆ ಸಾಮಾಜಿಕ, ಧಾರ್ಮಿಕವಾಗಿ ಯಾವದೇ ರೀತಿಯಿಂದಲೂ ವ್ಯಕ್ತಿಯ ಶೋಷಣೆಗೆ ಅವಕಾಶ ಇಲ್ಲದ ರೀತಿಯಲ್ಲಿ ತಳಹದಿಹಾಕಿ ಸಮಾಜ ರಚನೆಯಲ್ಲಿ ಆಮೂಲಾಗ್ರ ಮಾರ್ಪಡಿಸಿ ವ್ಯಕ್ತಿ ಮೌಲ್ಯಗಳಿಗೇನೆ ವಿಶೇಷ ಬೆಲೆಯನ್ನು ಕೊಡುವ ಹಾಗೇ ಸಮಾಜದ ರಚನೆ ಹೊಸ ಕ್ರಾಂತಿ ಮಾಡಿದ ಶ್ರೇಯಸ್ಸು ಬಸವಣ್ಣನವರದು.

ಬಸವಣ್ಣನವರು ಸಮಗ್ರವಾಗಿ ಸಾಮಾಜಿಕ, ವೈಚಾರಿಕಕ್ರಾಂತಿ ನಡೆಸಿದರು. ಸಮಾನತೆಯ ಮೇಲೆ ಅವರು ನವಸಮಾಜಕಟ್ಟಲು ಯತ್ನಿಸಿದರು. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನ್ನೆಲ್ಲಾ ನೊಂದೆ ಎಂಬೆ' ನುಡಿದ ನುಡಿಯೊಳಗೆ ಎಳ್ಳವನೆಯಷ್ಟು ಸಂದೇಹವುಳ್ಳರೆ ಹಲವುದೊರೆ ಮೂಗಕೊಯ್ಯ ಕೂಡಲಸಂಗಮದೇವ" ಅಂಗದ ಮೇಲೆ ಲಿಂಗವಿದ್ದಾತರೆಲ್ಲರನ್ನು ಸಂಗಮನಾಥನೆಂದು ಬಸವಣ್ಣನವರು ಭಾವಿಸಿದರು ಲಿಂಗಸಂಗಾತಿಯಾದ ಬಳಿಕ ವಿಪ್ರ ವಿಪ್ರನಾಗಿ ಉಳಿಯಲಿಲ್ಲ. ಅದೇ ರೀತಿ ಅಂತ್ಯಜ ಅಂತ್ಯಜನಾಗಿ ಉಳಿಯಲಿಲ್ಲ. ಅವರೆಲ್ಲ ಶಿವಭಕ್ತರಾದರೂ ಸರಿಸಮಾನರಾದರೂ ಭಾರತದ ಇತಿಹಾಸದಲ್ಲಿ ಆರ್ಯರು ಸಮಾಜವನ್ನು ಚತುರವರ್ಣದಲ್ಲಿ ಒಡೆದುದ್ದನ್ನು ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಲಿಂಗಸಂಸ್ಕಾರ ಮೂಲಕ ಒಂದು ಗೂಡಿಸಿದರು. ಹೀಗೆ ಅವರು ಕುಲ ಛಲಗಳನ್ನು ಖಂಡಿಸಿದರು. "ಕೊಲ್ಲುವವನೇ ಮಾದಿಗ ಹೊಲಸುತಿನ್ನುವವನೆ ಹೊಲೆಯ" ಎಂದು ಉಸುರಿದರು- ಬಸವಣ್ಣನವರ ಈ ವಾಣಿಯ ವಜ್ರಘಾತಕ್ಕೆ ಅವರ ವಿಚಾರಕ್ರಾಂತಿಗೆ ಜಾತಿಯ ಜಾಡ್ಯದ ಕೋಟೆ ತತ್ತರಿಸಿತ್ತು. ಹುಟ್ಟಸಿಂದ ಇಲ್ಲವೆ ವೃತ್ತಿಯಿಂದ ವ್ಯಕ್ತಿಯ ಜಾತಿಯನ್ನು ಗುರುತಿಸದೆ ಅವನ ನೀತಿಯಿಂದ ಆತ್ಮದಿಥೀತಿಯಿಂದ ಜಾತಿಗುರುತಿಸಬೇಕೆಂದು ತಿಳಿಸಿದರು.

ಬಸವಣ್ಣನವರ ಕೊಡುಗೆಗಳಲ್ಲಿ ಕಾಯಕವು ಶ್ರೇಷ್ಠ ಕೊಡುಗೆಯಾಗಿದೆ. ಪ್ರತಿಯೊಬ್ಬ ವ್ಯಕ್ತಿಯು ಅವನು ಗುರುವಾಗಲಿ, ಜಂಗಮನಾಗಲಿ ಇಲ್ಲವೆ ಭಕ್ತನಾಗಿರಲಿ ಏನಾದರೊಂದು ಕಾಯಕಮಾಡಿ ಹೊಟ್ಟೆಹೊರೆಯಬೇಕೆಂಬ ಕಾಯಕ ತತ್ವವನ್ನು ಪ್ರತಿಪಾದಿಸಿದರು. ಸೋಮಾರಿಗಳನ್ನು ಎಚ್ಚರಿಸಿ ಸಮಾಜವನ್ನು ಅರ್ಥಿಕವಾಗಿ ಬಲಪಡಿಸಲು ಯೋಚಿಸಿದರು. ಬಸವಣ್ಣನವರ ದೃಷ್ಟಿಯಲ್ಲಿ ಕಾಯಕ ಕೈಲಾಸವಾಯಿತು. ಕಾಯಕ ವಿದ್ದಲ್ಲಿ ಆರೋಗ್ಯವಿದೆ. ಆತ್ಮಗೌರವವಿದೆ, ಸಂಪದವಿದೆ ಎಲ್ಲರೂ ದುಡಿದು ತಿನ್ನಬೇಕು. ಕಾಯಕಮ್ಮಮಾಡದೇ ತಿನ್ನುವ ಅನ್ನ ವಿಷ, ಸತ್ಯಶುದ್ಧವಾದ ಯಾವುದೇ ಕಾಯಕ ಮಾಡಿದರೂ ಅದು ಕಾಯಕವೆನಿಸುತ್ತದೆ. ದುಡಿಮೆ ಆರಾಧನೆ ಈ ಎರಡರ ಸಮನ್ವಯವನ್ನು ಅಣ್ಣ ಕಾಯಕವೆಂದು ಕರೆದರು. ಕಾಸಿಕಮ್ಮಾರನಾದ, ಬೀಸಿಮುಡಿವಾಳನಾದ, ಹಾಸನಿಕ್ಕಿ ಸಾಲಿಗನಾದ ಇಂಥ ಯಾವುದೇ ವೃತ್ತಿ ವ್ಯವಸಾಯವಾದರೂ ಅದೇ ಪರಮಾತ್ಮನ ಆರಾಧನೆ ಎಂದು ಹೇಳಿ ಕಾಯಕದಲ್ಲಿ ತನು, ಮನ, ಶ್ರದ್ಧೆ, ಭಕ್ತಿ, ಗೌರವದಿಂದ ತಲ್ಲೀನನಾದವರ ಮನೆ ಕೈಲಾಸವೆಂದು ಕರೆದರು. ಈ ಕಾರ್ಯದಿಂದ ಸಮಾಜದಲ್ಲಿ ಪರಾವಲಂಬಿತನ ದೂರವಾಗಿ ಜನರಲ್ಲಿ ನವಚೈತನ್ಯ ಉಂಟಾಯಿತು. ಒಟ್ಟಿನಲ್ಲಿ ಬಸವಣ್ಣನವರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ವಿಚಾರಗಳು ಅದರಲ್ಲಿಯೂ ಮುಖ್ಯವಾಗಿ ಕಾಯಕ ಶ್ರಮ, ಗೌರವ ಹಾಗೂ ಸಮಾಜವಾದಗಳು ಸಮಗ್ರ ಸಮಾಜ ವೈಚಾರಿಕ ಕ್ರಾಂತಿಗೆ ಪುಷ್ಟಿಕೊಟ್ಟವು.

## ದಾಸೋಹಂಭಾವದ ಮಹತ್ವ

ವಿ. ಸಿ. ಅಂದಾನಿ, 1314, ಬಡಿಗಾರಗಲ್ಲಿ, ಗೋಕಾಕ.

ದಾಸೋಹಂಭಾವದಲ್ಲಿ ವಿನಯವು ಹಾಸುಹೊಕ್ಕಾಗಿದೆ. ವಿನಯವೇ ವಿದ್ವತ್ವದ ಲಕ್ಷಣ. ಬಡತನ ತಾಪತ್ರಯ ಕಷ್ಟಕಾರ್ಪಣ್ಯ ರೋಗಾದಿಗಳು ಬಂದವರಲ್ಲಿ ಸಾಮಾನ್ಯವಾಗಿ ವಿನಯಗುಣವು ಇದ್ದರೂ ಅವರ ಪೂರ್ಣತೆ ಕಂಡು ಬರುವುದಿಲ್ಲ. ಸಿರಿಸಂಪತ್ತು ಬಂದೊದಗಿದಾಗ, ಅಧಿಕಾರದಲ್ಲಿದ್ದಾಗ, ಆಳರಸರಾದಾಗ ವಿನಯ ಗುಣವು ಬಂದರೆ ಮಾತ್ರ ನಿಜವಾದ ವಿನಯ ಗುಣದ ಪರಾಕಾಷ್ಟತೆ ಕಂಡು ಬರುತ್ತದೆ. ಭಗವಂತನಲ್ಲಿಯ ಸಮರ್ಪಣಭಾವವು ಆತನ ದರ್ಶನಕ್ಕೆ ಕಾರಣ. ಭಗವಂತನ ಕಡೆಗೆ ಒಂದು ಹೆಜ್ಜೆಯನ್ನಿಟ್ಟರೆ ಆತನು ನಮ್ಮ ಕಡೆಗೆ ಹತ್ತು ಹೆಜ್ಜೆಗಳನ್ನಿಡುವನು. ನಮ್ರತೆಯಲ್ಲಿ ಭಗವಂತನ ಸಾಕ್ಷಾತ್ಕಾರವಿದೆ. ಸಮರ್ಪಣೆ ಭಾವನಾ ಪ್ರಧಾನವಾಗಿರದೆ ನಂಬಿಗೆ ಪ್ರಧಾನವಾಗಿದೆ. ಸಮರ್ಪಣಾ ಭಾವವು ಯಾವುದೇ ಲೋಭದಿಂದಾಗಲಿ, ತ್ಯಾಗದಿಂದಾಗಲಿ, ಮಾನಸಿಕ ಒತ್ತಡದಿಂದಾಗಲಿ ಬಂದದ್ದಲ್ಲ. ಆದರೆ ಅದು ಪೂರ್ಣ ನಿಷ್ಕಾಮ ಭಾವದಿಂದ ಮಾತ್ರ ಬಂದದ್ದು. "ವಿನಯವು ಸದಾಶಿವನ ಒಲುಮೆ" ಎಂಬುದು ಶರಣರವಾಣಿ. ಮಹಾಜ್ಞಾನಿಗಳಾದ ಶ್ರೀಮನ್ ನಿಜಗುಣ ಶಿವಯೋಗಿಗಳು ರಚಿಸಿದ ತಮ್ಮ ವೇದಾಂತ ಗ್ರಂಥದಲ್ಲಿ ಸಹ "ಸಿರಿವಡೆದು ಜೀವಿಸುವೆಡೆಯೊಳು ವಿನಯವನು ಬೇಡುವೆನು ಅಭವ ನಿಮ್ಮನು" ಹೇ ಪರಮಾತ್ಮನೆ, ಸಿರಿ ಸಂಪತ್ತು ಬಂದೊದಗಿದಾಗ ವಿನಯವನ್ನು ಕೊಡು ಅಂತ ಬೇಡಿಕೊಂಡಿದ್ದಾರೆ. ವಿನಯ ಗುಣವು ಮಹಾತ್ಮರಲ್ಲಿಯ ಒಂದು ದೊಡ್ಡ ಗುಣವು.

ಅಹಂಕಾರವು ಮನುಷ್ಯನನ್ನು ದುರ್ಬಲಗೊಳಿಸುವದು. ಅದು ಹಿಂಸಾತ್ಮಕ ಮಾರ್ಗವನ್ನು ಅನುಸರಿಸಿ ಪ್ರತಿಕೂಲ ಘಟನೆಗಳು ಜರಗಿದಂತೆ ಅಹಂಕಾರವು ಕ್ಷೀಣವಾಗುತ್ತಾ ಹೋಗುವದು. ಅಹಂಕಾರವು ಎಲ್ಲ ದುರ್ಗುಣಗಳಲ್ಲಿ ಅಧಿಕವಾದದ್ದು. ಸಾಮಾನ್ಯವಾಗಿ ಶ್ರೀಮಂತಿಕೆಯು ಬಂದಾಗ್ಗೆ ದುರಹಂಕಾರವು ಸಹಜವಾಗಿ ಬರುವದು. ಅಹಂಕಾರವು ಮನುಷ್ಯನ ಮಹಾವೈರಿ. ಸಂಪತ್ತು ಹೆಚ್ಚಿದಂತೆ ಅಹಂಕಾರವು ಹೆಚ್ಚುತ್ತಾ ಹೋಗುವದು ಇದು ಲೌಕಿಕ ವಾಡಿಕೆ. ಧನ ಸಂಗ್ರಹದಿಂದ ಸಾಮಾನ್ಯವಾಗಿ ದರ್ಪ ಬರುತ್ತದೆ. ಅವನಲ್ಲಿ ನಮ್ರತೆ ಶೂನ್ಯ. ಬಡವನು ಧನವಿಲ್ಲದಕ್ಕೆ ನಮ್ರನಾಗಿರುವನು. ಆದರೆ ತಿಳಿದವನು ಧನಿಕನಾದರೂ ನಮ್ರನಾಗಿಯೇ ಇರುವನು. ಅಹಂಕಾರದಿಂದ ಮನುಷ್ಯನಿಗೆ ಪಶುತ್ವವು ಬರುತ್ತದೆ. ಆದರೆ ನಮ್ರತೆಯಿಂದ ಮನುಷ್ಯನು ದೇವತ್ವಕ್ಕೆ ಏರುತ್ತಾನೆ. ಅಹಂಕಾರವು ಹೀನಸ್ಥಿತಿಗೆ ತಂದರೆ ವಿನಯವು ಮನುಷ್ಯನೊಳಗಿನ ಸುಪ್ತ ಶಕ್ತಿಯನ್ನು ವಿವೇಚನಗೊಳಿಸಿ ಅವನನ್ನು ಮುನ್ನಡಿಸಿಕೊಂಡು ಹೋಗುತ್ತದೆ.



ಮೃದು ವಚನವೇ ಸಕಲ ಜಪತಪಂಗಳು. ದಾಸೋಹಂಭಾವವು ಜೀವನದ ಸಾರ ಸರ್ವಸ್ವ. ವಂಚನೆಯಿಲ್ಲದೆ ಮಾಡುವ ಸತ್ಯಶುದ್ಧವಾದ ಕಾಯಕವೇ ಕೈಲಾಸ. ಹೀಗೆ ಭಕ್ತಿ, ಧರ್ಮ, ನೀತಿ, ನಿರ್ಮಲತೆ ಆಚಾರ ತತ್ವಗಳನ್ನು ಭಕ್ತಿ ಭಂಡಾರಿ ಬಸವಣ್ಣನವರ ಸಂಪಾದನೆಯಿಂದ ಕಂಡುಕೊಳ್ಳಬಹುದು. ದೇಹ ಮತ್ತು ಜೀವ ಭಾವವನ್ನು ಕಳೆದುಕೊಂಡು ದಾಸ್ಯ ಭಕ್ತಿಯ ಮಾರ್ಗದಿಂದ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡು ಅನೇಕ ಶಿವಶರಣರು, ಸಂತರು, ದಾಸರು ಜೀವನ್ಮುಕ್ತ ಸ್ಥಿತಿಯನ್ನು ಹೊಂದಿದ್ದನ್ನು ನಾವು ಕೇಳಿದ್ದೇವೆ. ಅದು ಕಾರಣ ಶ್ರವಣಾದಿ ನವವಿಧ ಭಕ್ತಿಗಳಲ್ಲಿ ದಾಸ್ಯ ಭಕ್ತಿಗೆ ಮಹತ್ವವನ್ನು ಕೊಡಲಾಗಿದೆ. ದಾಸ್ಯತ್ವದಿಂದ ಈಶ್ವತ್ವ ಎಂಬುದನ್ನು ಅವರು ಮನಗಾಣಿಸಿಕೊಟ್ಟರು.

ಅಂತರಂಗ ವಿಕಾಸ ಹೃದಯದ ಪಕ್ವತೆ-ಉನ್ನತ ತತ್ವಗಳನ್ನು ಒಳಗೊಂಡುದು ದಾಸರ ಸಂಗೀತದಿಂದ ಕೂಡಿದ ಭಕ್ತಿಯ ಮಾರ್ಗವು ದಾಸರ ರಮ್ಯ ಕಲಾಕೃತಿ. ಇಂಥ ದಾಸ ಸಾಹಿತ್ಯ ಗಂಗೆಯಲ್ಲಿ ಮಿಂದು ಪುನೀತವಾಗಬೇಕೆಂಬುದೇ ಅವರ ಹಾರೈಕೆ. ಈ ದಾಸ ಸಾಹಿತ್ಯದಲ್ಲಿ ನಮ್ರತೆ ತುಂಬಿದೆ. "ಸೋಹಂ ಎಂಬುದು ಅಂತರಂಗದ ಮದ. ಶಿವೋಹಂ ಎಂಬುದು ಬಹಿರಂಗ ಮದ. ಈ ದ್ವಂದ್ವವನಳಿದು ದಾಸೋಹಂ ಎಂದೆನಿಸಯ್ಯಾ" ಎಂಬುದು ಶರಣರ ದಾಸೋಹಂಭಾವವು. ತಾನು ಪ್ರಾಮಾಣಿಕದಿಂದ ದುಡಿದು ಪಡೆದದ್ದನ್ನು ಇತರರಿಗೆ ದೈವೀಭಾವದಿಂದ ಫಲಾಪೇಕ್ಷೆಯಿಲ್ಲದೆ ನೀಡಿ ಆನಂದ ಪಡೆಯುವುದೇ ದಾಸೋಹ. ಶರಣರು ದಾಸೋಹತತ್ವವನ್ನು ಆಚರಣೆಯಿಂದ ಪ್ರತಿಪಾದಿಸಿ ದಾಸೋಹ ಮಾರ್ಗವನ್ನು ತೋರಿಸಿ ದಾಸೋಹಿಗಳಾಗಿದ್ದಾರೆ. ಸಮಾಜಕ್ಕೆ ಭಕ್ತಿ ಭಾವದಿಂದ ಅರ್ಪಣಗೆಯ್ಯುವದೇ ದಾಸೋಹ. ತನಗಾಗಿ ಮಾಡುವುದು ಉಪಜೀವನ ಪರಹಿತಕ್ಕಾಗಿ ಮಾಡುವದು ಜೀವನ. ಪರಹಿತವೇ ಶಿವಹಿತವೆಂದು ಮಾಡುವದು ಶಿವಜೀವನ. ಇಂಥ ಶಿವಜೀವನವೇ ದಾಸೋಹ. ●

## ವಚನ

ಶ್ರೀಗುರುಕರುಣವೆ ಲಿಂಗ. ಲಿಂಗದ ನಿಜವೆ ಜಂಗಮ. ಇಂತು ಇದು ಬಹಿರಂಗದ ವರ್ತನೆ. ಇನ್ನು ಅಂತರಂಗದ ಸುಜ್ಞಾನವೆ ಜಂಗಮ. ಆ ಜಂಗಮದ ನಡೆವ ಸತ್ಕ್ರೀಯೆ ಲಿಂಗ. ಆ ಉಭಯದ ಏಕತ್ವಸಿದ್ಧಿಯೆ ಗುರು. ಇದು ಕಾರಣ ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾದಲ್ಲಿ ಜಂಗಮದಾಸೋಹ ಜಂಗಮದಾಸೋಹವಿಲ್ಲದಡೆ ಲಿಂಗ ತೃಪ್ತಿ ಇಲ್ಲ. ಅಂಗದ ಮೆಲೆ ಲಿಂಗವಿಲ್ಲದಿರ್ದಡೆ ಆ ಜಂಗಮ ಸೇವೆಯ ಕೈಕೊಳ್ಳ. ಅದು ಕಾರಣ ಒಂದ ಬಿಟ್ಟು ಒಂದರಲ್ಲಿ ನಿಂದರೆ ಅಂಗವಿಲ್ಲದ ಆತ್ಮನಂತೆ ಶಕ್ತಿ ಇಲ್ಲದಶಿವನಂತೆ ದೀಪವಿಲ್ಲದ ಪ್ರಕಾಶದಂತೆ. ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವಹೀನನು ರಾಯಪಟ್ಟಕ್ಕೆ ಸಲುವನೆ ? ಲಿಂಗಹೀನನು ಭಕ್ತ್ಯಾಚಾರಕ್ಕೆ ಸಲುವನೆ ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ತ್ರಿವಿಧ ಸನ್ಮತವೆ ಚರಸೇವೆಯಯ್ಯಾ ಚಂದಯ್ಯ ಪ್ರಭುವೆ.

# ಅಸಹಕಾರ ಚಳವಳಿ

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮುಚ್ಚಿನ, ದಕ್ಷಿಣ ಕನ್ನಡ-574295

ಭಾರತ ಸ್ವಾತಂತ್ರ್ಯ ಸಾಧನೆಯಲ್ಲಿ ಮೊತ್ತ ಮೊದಲಿನ ಹೆಜ್ಜೆ ಅಸಹಕಾರ ಚಳವಳಿ. ಅಹಿಂಸಾತ್ಮಕವಾದ, ಜನತಾ ಜನಾರ್ದನನ ಚಳವಳಿಯಾಗಿ ಅದನ್ನು ಮನೆಮನೆಗೆ ತಲುಪಿಸಿದವರೇ ಮಹಾತ್ಮಾ ಗಾಂಧೀಜಿ. ಮೊದಲನೆಯ ಜಾಗತಿಕ ಯುದ್ಧದ ವೆಚ್ಚವನ್ನು ನಿಭಾಯಿಸುವುದಕ್ಕಾಗಿ ಬ್ರಿಟಿಷ್ ಸರಕಾರ ಭಾರತೀಯರ ಮೇಲೆ ಹೆಚ್ಚಿನ ತೆರಿಗೆಯ ಹೊರೆ ವಿಧಿಸಿತು. ಇದನ್ನು ಯಾರಾದರೂ ಪ್ರತಿಭಟಿಸ ಬಾರದೆಂಬ ದೃಷ್ಟಿಯಿಂದ ಯಾವನೇ ಭಾರತೀಯನನ್ನಾದರೂ ರಾಜದ್ರೋಹದ ಸಂದೇಹದಲ್ಲಿ ಬಂಧಿಸಿ ಶಿಕ್ಷಿಸಬಹುದೆಂಬ ರೌಲಟ್ ಶಾಸನವನ್ನೂ ಬಳಕೆಗೆ ತಂದಿತು.

ಈ ದಬ್ಬಾಳಿಕೆಯನ್ನು ವಿರೋಧಿಸಲು ಜಲಿಯನ್ ವಾಲಾ ಬಾಗ್‌ನಲ್ಲಿ ಸೇರಿದ ಅಪಾರ ಜನಸ್ತೋಮ ಶಾಂತಿಯುತ ಮಾತುಕತೆ ನಡೆಸಿತ್ತು. ಅವರ ಮೇಲೆ ಗುಂಡಿನ ಮಳೆಗರೆದು ಸರಕಾರ ಹತ್ಯಾಕಾಂಡ ಮಾಡಿತು.

ಈ ಹತ್ಯಾಕಾಂಡದಿಂದ ಜನತೆಗೆ ಉಂಟಾದ ಅಸಂತೋಷವನ್ನು ಪ್ರಕಟಿಸಲು ಗಾಂಧೀಜಿ ಅಸಹಕಾರ ಚಳುವಳಿಯನ್ನು 1920 ರ ಸುಮಾರಿಗೆ ರೂಪಿಸಿದರು. ಚಳುವಳಿಯ ಮೊದಲ ಹೆಜ್ಜೆಯಾಗಿ ವಿದೇಶಿ ಬಟ್ಟೆಗಳ ರಾಶಿಗೆ ಬೆಂಕಿ ಹಚ್ಚಿದರು. ಗಾಢವಾಗಿ ಮುಸುಕಿದ ಕತ್ತಲಿನಲ್ಲಿ ಸೇರಿದ ಭಾರೀ ಜನಸಮೂಹದ ಕುದಿಯುವ ರಕ್ತದ ಗಾಢವಾದ ಬೆಂಕಿಯ ಮುಂದೆ ಆಕಾಶದೆತ್ತರ ಹತ್ತಿದ ದಾವಾನಲದ ದೃಶ್ಯ ರೋಮಾಂಚಕರವಾಗಿತ್ತು.

1920 ರ ಸೆಪ್ಟಂಬರ್‌ನಲ್ಲಿ ಕಲ್ಕತ್ತದ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿ ಅಸಹಕಾರ ಚಳುವಳಿಯ ಮಾರ್ಗದರ್ಶಿ ಸೂತ್ರದ ರಚನೆ ಮಾಡಿದರು. ಸರಕಾರಿ ನೌಕರಿಗೆ ಬಹಿಷ್ಕಾರ, ಸರಕಾರ ನೀಡಿದ ಪದವಿಗಳ ತ್ಯಾಗ, ಸರಕಾರಕ್ಕೆ ಕಂದಾಯ ಕೊಡಲು ನಿರಾಕರಣೆ, ಸರಕಾರಿ ಸಮಾರಂಭಗಳಿಗೆ ಬಹಿಷ್ಕಾರ, ನ್ಯಾಯಲಯುಗಳಿಗೆ ಹೋಗದಿರುವುದು, ಶಾಲಾ ಕಾಲೇಜುಗಳಿಂದ ಮಕ್ಕಳನ್ನು ಬಿಡಿಸುವುದು, ಇರಾಕಿನ ಬ್ರಿಟಿಷ್ ಸೇನೆಯಲ್ಲಿರುವ ಭಾರತೀಯ ಸೈನಿಕರು ಶಸ್ತ್ರತ್ಯಾಗ ಮಾಡುವುದು, ಚುನಾವಣೆಯಲ್ಲಿ ಅಭ್ಯರ್ಥಿಯಾಗಿ, ಮತದಾರನಾಗಿ ಪಾಲುಗೊಳ್ಳದೆ ಸರಕಾರದ ಆಡಳಿತಕ್ಕೆ ಸಹಕರಿಸದಿರುವುದು.

ಸತ್ಯ ಅಹಿಂಸೆಗಳ ಹಾದಿಯಲ್ಲಿ ನನೆಯಬೇಕಾದ ಚಳುವಳಿಯ ವಿಧಾನ ಹೀಗಿತ್ತು. ಆದರೆ ಉತ್ತರ ಪ್ರದೇಶದಲ್ಲಿ ಉದ್ರಿಕ್ತ ಜನರು ಠಾಣೆಯೊಂದಕ್ಕೆ ಬೆಂಕಿ ಹಚ್ಚಿದರು.



ಗಾಂಧೀಜಿ ಚಳುವಳಿಯನ್ನು ತಾತ್ಕಾಲಿಕವಾಗಿ ನಿಲ್ಲಿಸಿದರೂ ಹರತಾಳ, ಅಸಹಕಾರ ನಡೆದೇ ಇತ್ತು. ಅಸಹಕಾರ ಚಳುವಳಿ ಮತ್ತೊಮ್ಮೆ ಭುಗಿಲೆದ್ದುದು 1930 ರಲ್ಲಿ ಉಪ್ಪಿನ ಮೇಲೆ ಸರಕಾರ ಹೇರಿದ ಕರದ ವಿರುದ್ಧ ಗಾಂಧೀಜಿ ಜನರನ್ನು ಸಂಘಟಿಸಿದರು. ಸ್ವತಃ ಉಪ್ಪು ತಯಾರಿಸಿ ಕಾಯಿದೆಭಂಗ ನಡೆಸಿದರು.

ಬ್ರಿಟಿಷ್ ಸರಕಾರ ಭಾರತೀಯರ ಮೇಲೆ ಪ್ರಭುತ್ವ ನಡೆಸಿದ್ದುದು ಹಿಂಸೆ ಮತ್ತು ಅಸಹಕಾರದ ಆಧಾರದ ಮೇಲೆ ಅದನ್ನು ಮುರಿಯಲು ಗಾಂಧೀಜಿ ಅಹಿಂಸಾತ್ಮಕ ಮಾರ್ಗದಲ್ಲಿ ಬಲಪಡಿಸಿದ ಚಳುವಳಿಯೇ ಅಸಹಕಾರ. ಬ್ರಿಟಿಷರನ್ನು ಮಣಿಸಲು ಇದು ಪ್ರಬಲ ಅಸ್ತ್ರವೇ ಆಯಿತು.

ಶಾಂತಿ, ಅಹಿಂಸೆ ಮತ್ತು ಬಲಿದಾನಗಳಿಂದ ಕಡೆಗೂ ಪರತಂತ್ರದ ಶೃಂಖಲೆಯನ್ನು ಮುರಿದು ನಮ್ಮ ತವರುಮನೆಗೆ ಸ್ವಾತಂತ್ರ್ಯದ ಮುಡಿಪು ಸಲ್ಲಿಸಿದವರು ನಾವು. ಸ್ವಾತಂತ್ರ್ಯದ ಬಂಗಾರದ ಹಬ್ಬಕ್ಕೆ ಜೋಗಸೆಯೊಡ್ಡಿ ಹಾರ್ದಿಕ ಸ್ವಾಗತ ಕೋರುತ್ತಿದ್ದೇವೆ. ನಮ್ಮ ಪ್ರತಿಭೆಗಳು ವಿದೇಶಗಳಿಗೆ ಹೋಗಿ ದೇಶದ ಉದ್ಧಾರದಲ್ಲಿ ಸಮರ್ಪಿಸಬೇಕಾದ ಸೇವೆಯ ಕಾಣಿಕೆ ಬಟ್ಟಲು ಬರಿದಾಗಿದೆ. ವಿದೇಶಿ ವಸ್ತುಗಳ ವ್ಯಾಮೋಹದ ಫಲವಾಗಿ ತೆರಿಗೆ ಗಳ್ಳತನ ಹೆಚ್ಚಿದೆ. ದೇಶೀ ಕೈಗಾರಿಕೆಗಳು ಎಷ್ಟು ಉತ್ತಮ ಫಲಗಳನ್ನು ನೀಡಿದರೂ ಜನತೆಯ ಪ್ರೋತ್ಸಾಹದಿಂದ ವಂಚಿತವಾಗಿವೆ. ವಿದೇಶೀ ವ್ಯಾಮೋಹ ನಮ್ಮ ಶುದ್ಧ ಸಂಸ್ಕೃತಿಗೆ ಮಾರಕವಾಗಿದೆ. ಭವಿಷ್ಯದ ಪೀಳಿಗೆಯ ನಡೆ, ನುಡಿ ಎಲ್ಲವೂ ವಿದೇಶೀ ವಾಸನೆಯಿಂದ ಕಂಗೆಡಿಸಿವೆ

ಈ ದೇಶದ ಜನರಿಗೆ ಮೈ ಮುಚ್ಚುವ ಬಟ್ಟೆ ಇಲ್ಲ. ಆದ್ದರಿಂದ ನನಗೂ ಆಡಂಬರ ಬೇಡ ಎಂದು ಸರಳ ಜೀವನವನ್ನು ಬದುಕಿದ ಬಾಪೂ ಕಂಡ ಕನಸಿಗೆ ಅಪಚಾರ ಮಾಡದೆ ಇರೋಣ. ಪರಕೀಯರನ್ನು ಕಿತ್ತೊಗೆಯಲು ಯಾವ ಚಳುವಳಿ ಇಲ್ಲಿ ಪ್ರಭಾವ ಬೀರಿತೋ ಇಂದು ಆ ಕತೆಯನ್ನೆ ಮರೆತು ವಿದೇಶೀ ವ್ಯಾಮೋಹಕ್ಕೆ ಬಲಿಯಾಗುವ ದುರಾಶೆಗೆ ಮುಕ್ತಾಯ ಹೇಳೋಣ. ನಮ್ಮ ಅಸಹಕಾರ ಪ್ರವೃತ್ತಿಯ ಉತ್ಕಟತೆ ದೇಶದ ಅಭಿವೃದ್ಧಿಗೆ ಮಾರಕವಾಗುವ ರೀತಿಯಲ್ಲಿ ಸ್ವತಂತ್ರ ದೇಶದಲ್ಲಿ ಬಳಕೆಯಾಗುತ್ತಿರುವುದು ವಿಷಾದದ ಸಂಗತಿ. ಯಾರನ್ನು ಇಲ್ಲಿಂದ ಓಡಿಸಲು ಈ ಮಹತ್ತಮ ಚಳುವಳಿ ಸೃಷ್ಟಿಯಾಯಿತೋ ನಮ್ಮ ವಿರುದ್ಧ ನಾವೇ ಅದನ್ನು ಬಳಸಿದರೆ ಮತ್ತೆ ಪಾರತಂತ್ರ್ಯದ ಪರೋಕ್ಷ ಆಹ್ವಾನ ಎಂಬುದನ್ನು ಎಲ್ಲರ ಚಿಂತನೆಗೆ ಅಗತ್ಯವಾದ ಸಂಗತಿಯೆಂದು ಭಾವಿಸಬೇಕು.

# ಸ್ವಾತಂತ್ರ್ಯ ಒಂದು ಅವಲೋಕನ

ಪಂ|| ಕವಿತಾಕೃಷ್ಣ ಎಂ. ಎ ಉಪನ್ಯಾಸಕರು, ಕ್ಯಾತ್ಸಂದ್ರ, ತುಮಕೂರು ತಾಲ್ಲೂಕ್

" ಸ್ವಾತಂತ್ರ್ಯದಿಂದ ಸಮಾಜದ ಸರ್ವಾಂಗೀಣ ಪ್ರಗತಿಯಾಗಬೇಕು. ಸಾಮಾಜಿಕರ ದೇಹ- ಬುದ್ಧಿ- ಮನಸ್ಸುಗಳು ಸುಸ್ಥಿಯಲ್ಲಿರ ಬೇಕು. ಮಿಗಿಲಾಗಿ ರಾಷ್ಟ್ರದಲ್ಲಿ ಸುಖ-ಶಾಂತಿ- ನೆಮ್ಮದಿ ನೆಲಸಿರಬೇಕು. ಉನ್ನತ ಸ್ತರವೇರಿದ ಸಂಸ್ಕೃತಿ ಅಲ್ಲಿ ಬೆಳಗುತ್ತಿರಬೇಕು. ಸಮಾನತೆ ಎಂಬ ಪ್ರೇಮವಾಹಿನಿ ವಿಶಾಲವಾಗಿ ಹರಿಯುತ್ತಿರಬೇಕು ಸಭ್ಯತೆಯಿಂದ ಕೂಡಿದ ನಾಗರೀಕತೆ ಅರಳಿ ಚೆಲುವುಬಡಿಯಬೇಕು ಜ್ಞಾನದ ತಳಹದಿಯ ಮೇಲೆ ವಿಜ್ಞಾನರಾರಾಜಿಸಬೇಕು. ಧರ್ಮವು ಮಾನವೀಯತೆ ಮೈಲಿಗಲ್ಲಾಗಿರಬೇಕು. ಆಳುವವ ದೇವ ಮಾನವನಾಗಿರಬೇಕು. ಸರ್ವ ಪ್ರಜೆಗಳು ಸತ್ಪ್ರಜೆಗಳಾಗಿರಬೇಕು. ಸ್ವರ್ಗ ಎಂಬವುದಿದ್ದರೆ ಆ ರಾಷ್ಟ್ರವೇ ಆಗಿರಬೇಕು- ದೇವರೆಂಬುವ ಇದ್ದರೆ ಅವನು ಕಾಯಕದಲ್ಲೇ ಕಾಣಬೇಕು. ಭಾವೈಕ್ಯತೆಯ ನಂದಾದೀಪ ಅಲ್ಲಿ ಸದಾ ಬೆಳಗಬೇಕು. ಸ್ವಾತಂತ್ರ್ಯದ ಫಲ ಸಕಲರಿಗೂ ಸಮಾನವಾಗಿ ಮುಟ್ಟಬೇಕು.

ಬೃಹತ್ ರಾಷ್ಟ್ರವಾದ ನಮ್ಮ ಭಾರತಕ್ಕೆ ಸ್ವಾತಂತ್ರ್ಯ ಬಂದು 50 ವರ್ಷಗಳೇ ಆದವು. ಈ ವರ್ಷ 'ಸುವರ್ಣ ವರ್ಷ' ಹಿಮದ ಗಡಿಯಿಂದ ಕಡಲ ತಡಿಯ ತನಕ ಚಿನ್ನದ ಹಬ್ಬ ಆಚರಿಸುವ ಸಡಗರ. ತ್ರಿವರ್ಣ ಧ್ವಜ ಹಾರಿಸಿ ಗೌರವ ಸಲ್ಲಿಸುವ ತವಕ ಆದರೆ ಸ್ವತಂತ್ರ ಹೊಂದಿದ ಈ ಭವ್ಯ ಭಾರತದ ಸಾಧನೆಯ ಒಟ್ಟು ಫಲಿತಾಂಶವೇನು? ಸ್ವಾತಂತ್ರ್ಯದ ಫಲ ಸರ್ವಭಾರತಿಯರಿಗೂ ಮುಟ್ಟಿದಿಯೇ? ದೇಶ 50 ವರ್ಷಗಳಲ್ಲಿ ಮುಟ್ಟಬೇಕಾದ ಗುರಿಯನ್ನು ಮುಟ್ಟಿದಿಯೇ ? ವಿಶ್ವದಲ್ಲಿ ಭಾರತದ ಸ್ಥಾನಮಾನವೇನು ? ಎಂದು ತಿಳಿಯಬೇಕಾದ ಕಾಲ ಇದಾಗಿದೆ. ಸರ್ವ ಭಾರತೀಯರು ತಮ್ಮ ಅಂತರಂಗಗಳನ್ನು ತಾವೇ ನೊಡಿಕೊಂಡು ಬೆಲೆ ಕಟ್ಟಬೇಕಾಗಿದೆ

ಗಾಂಧೀಜಿ ಒರ್ವ ದೇವ ಮಾನವ. ಭಾರತದಂತಹ ಭವ್ಯ ನಾಡಿನ ಅಮೃತ ಫಲ. ತ್ಯಾಗ - ಸಮರ್ಪಣೆ - ಬಲಿದಾನಗಳಿಂದ ಬೆಳಗಿದ ಅಪೂರ್ವವ್ಯಕ್ತಿ, ಮಹಾತ್ಮ ಎಂಬ ಹೆಸರಿಗೆ ಅತ್ಯಂತ ಅರ್ಹರಾಗುವ ಅಪೂರ್ವ ವ್ಯಕ್ತಿ. ತನ್ನ ಯುಗವನ್ನು 'ಗಾಂಧಿಯುಗ' ಎನ್ನುವಂತೆ ಮಾಡಿದ ರಾಷ್ಟ್ರವೀರ. ಗಾಂಧಿ ಯುಗದ ಮಂದಿಗೆ ಅಪ್ಪಟ ದೇಶಪ್ರೇಮವಿತ್ತು. 'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ " (ಜನ್ಮ ಕೊಟ್ಟ ತಾಯಿ, ಜನ್ಮವಿತ್ತ ಭೂಮಿ, ಸ್ವರ್ಗಕ್ಕಿನ್ನ ಮಿಗಿಲು) ಎಂಬ ಮನೋನ್ಮಂತ್ರ ಅವರದಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ಪಡೆಯಬೇಕೆಂಬುದು ಅವರ ಮಹೋದ್ದೇಶವಾಗಿತ್ತು. ಅದಕ್ಕಾಗಿ ತ್ಯಾಗಿಗಳಾದರು, ಯೋಗಿಗಳಾದರು. ಚಳುವಳಿಗೆ ಸೆಡ್ಡು ಹೊಡೆದು ನಿಂತರು. ಬಲಿದಾನಕ್ಕೆ ಮುಂದಾದರು. ಜಾತಿಗಳನ್ನು ಮರೆತರು. ನೀತಿಯನ್ನು ಹಿಡಿದರು. ದೇಶದಲ್ಲಿದ್ದ ಅನಂತ ದೇವರುಗಳನ್ನು ಗಂಟು



ಕಟ್ಟಿಟ್ಟರು. ಭಾರತಾಂಬೆಯೊರ್ವಳನ್ನೇ ದೇವರೆಂದರು. ತ್ಯಾಗ-ಬಲಿದಾನ-ಸಮರ್ಪಣ ಭಾವಗಳಿಂದ ಅರ್ಚಿಸಿದರು ಬ್ರಿಟೀಷರ ಬಗ್ಗು ಬಡಿಯಲು ನಿಶ್ಚಯಿಸಿದರು. ಮನೆ ಮಠ ಮರೆತರು. ಊರು ತೊರೆದರು. ಚಳುವಳಿ ಮಾಡಿದರು. ಲಾಟಿ-ಬೂಟಿನ ಪೆಟ್ಟು ಉಂಡರು. ಸೆರೆಮನೆಯಲ್ಲಿ ಕೊಳೆತರು. ನಾನಾ ವಿಚಿತ್ರ ಕ್ರೂರ ಶಿಕ್ಷೆ ಅನುಭವಿಸಿದರು. ಅವರು ಎಳ್ಳಷ್ಟು ಜಗ್ಗಲಿಲ್ಲ, ಕುಗ್ಗಲಿಲ್ಲ. ಅಪ್ಪಟ ಭಾರತೀಯರಾಗಿ ಹಿಗ್ಗಿದರು. ನೋವಿನಲ್ಲೂ ಆನಂದ ಕಂಡರು. ಐಕ್ಯಗಾನ ಹಾಡಿದರು. ಭಾರತಾಂಬೆಗೆ ಜಯ ಹಾಕಿದರು. ಬ್ರಿಟೀಷರು ಭಾರತೀಯರ ಐಕ್ಯತೆ - ಹೋರಾಟ ಕಂಡು ನಡುಗಿದರು. ಅವರ ಕೋವಿಗಳು ಥರ ಥರ ಗುಟ್ಟಿದವು. ಅವರ ಗಂಡೆದೆಗಳು ಬೆಂಡಾದವು. ಭಾರತ ಬೃಹತ್ತಾಯಿತು. ಮಹತ್ತಾಯಿತು. ಎಲ್ಲೆಲ್ಲೂ ಸ್ವಾತಂತ್ರ್ಯ ಕಹಳೆ ಮೊಳಗಿತು. ನೇಣುಗಂಬ ಏರಿದರು ಸ್ವಾತಂತ್ರ್ಯದ ಕಾವು ಕಿಂಚಿತ್ತು ಕುಗ್ಗಲಿಲ್ಲ- ಭಾರತೀಯರು ಬಗ್ಗಲಿಲ್ಲ, ರಕ್ಕಸರಾದ ಬ್ರಿಟೀಷರು ಸೋತು ಸೊರಗಿದರು. ಅವರ ಕೋವಿ, ಬಾಂಬುಗಳು 'ಫುಸ್' ಅಂದವು. ಗಾಂಧಿಯುಗದ ಜನ ದೇಶದ ದಾಸ್ಯ ಪಾಶ ಕಿತ್ತು ಹರಿದ್ದಿತ್ತು. ಸ್ವಾತಂತ್ರ್ಯ 1947 ನೇ ಆಗಸ್ಟ್ 15 ರಂದು ಅದೂ ನೆಟ್ಟ ನಡುರಾತ್ರಿಯಲ್ಲಿ ಪಡೆಯಿತು.

"ಶತ ಶತ ಮಾನಗಳ ಕಾಲ ಕವಿದ ದಾಸ್ಯದ ಶಾಪ ಅಳಿಯಿತು
ಗಾಂಧಿಯುಗದ ಅಪ್ಪಟ ಭಾರತೀಯರಿಂದ ಸ್ವಾತಂತ್ರ್ಯ ಲಭಿಸಿತು
ರಾಮರಾಜ್ಯವಾಗಬೇಕೆಂಬ ಒಕ್ಕೊಗು ಸಂಕಲ್ಪ ಅಂದಾಯಿತು
ಭಾರತೀಯರಿಗೆ ಸುಖ-ಶಾಂತಿ ನೆಮ್ಮದಿ ನೀಡಲು ಸರ್ಕಾರ ರೂಪುಗೊಂಡಿತು.
ಇದಿಷ್ಟು ಚರಿತ್ರೆಯಾಯಿತು.

ದೇಶಕ್ಕೆ ಸ್ವಾತಂತ್ರ್ಯ ಲಭಿಸಿತು. ಹಿಂದೂಸ್ಥಾನ-ಪಾಕಿಸ್ಥಾನ ಎಂದು ಇಬ್ಭಾಗವೂ ಆಯಿತು. ಮಹಾತ್ಮಗಾಂಧಿಯ ಕೊಲೆಯೂ ಆಯಿತು.

ಈ ಅಂಶಗಳೂ ಸಹ ಇತಿಹಾಸದ ಪುಟಗಳನ್ನು ಸೇರಿದವು.

ಭಾರತ ಗಣತಂತ್ರದಿಂದ ಕೂಡಿತು. ಮತದಾನ ಪದ್ಧತಿ ಬಂದಿತು. ಜನಪ್ರತಿನಿಧಿಗಳು ನಮ್ಮ ನೇತಾರರಾದರು. ಆಡಳಿತ ಚುಕ್ಕಾಣಿ ಹಿಡಿದರು. ಹಿಡಿದಾಗ ರಾಷ್ಟ್ರದಲ್ಲಿ ಸ್ವಾತಂತ್ರ್ಯ ಫಲ ಹಂಚುವ ಕಳಕಳಿ, ಸಾಮಾಜಿಕ ಕಾಳಜಿ ಬೃಹತ್ತಾಗಿತ್ತು. ಖಾದಿ ದೇವಮಾನವದ ಸಂಕೇತವಾಗಿತ್ತು. ಅಲ್ಲಿ ನಿರ್ಮಲಭಾವ ತುಂಬಿ ತುಳುಕಾಡುತ್ತಿತ್ತು. ಸ್ವಾತಂತ್ರ್ಯ ಪ್ರೇಮವು ವ್ಯಕ್ತಿಯ ಪತಾಕೆಯಾಗಿತ್ತು.

## ಖಾದಿ ಏನಾಯಿತು ?

ಈ ಪ್ರಶ್ನೆಗೆ ಇಂದು ಉತ್ತರಿಸಲು ಹೇಸಿಗೆಯಾಗುತ್ತದೆ. ಖಾದಿ ಅಪವಿತ್ರವಾಯಿತು. ರಕ್ಷಣೆಗುಣ ಬಿಟ್ಟು ಭಕ್ಷಣೆ ಗುಣ ಹೊಂದಿತು. ತ್ಯಾಗಜೀವಿಯಾ

ಗಿದ್ದ ಕಾವಿಧಾರಿ ಭೋಗ ಜೀವಿಯಾದ. ಶ್ರಮವಿಲ್ಲದ ಗಳಿಕೆಗೆ ಮುಂದಾದ. ಮತದಾರರನ್ನು ಹೀನವಾಗಿ ಕಂಡ ಗಾಂಧಿತತ್ವಗಳನ್ನು ಕೊಂದ. ಹೆಸರಿಗೆ ಖಾದಿ ಧರಿಸಿ ಗೋಮುಖವ್ಯಾಘ್ರನಾದ. ಲಂಚವೆಂಬ ಬಕಾಸುರನನ್ನು ಸೃಷ್ಟಿಸಿದ. ಅನಾಚಾರವೆಂಬ, ಭ್ರಷ್ಟಾಚಾರವೆಂಬ ಹೊಸ ಖಾತೆ ತೆರೆದಿದೆ.
ಒಂದೇ ಮಾತಿನಲ್ಲಿ ಹೇಳುವುದಾದರೆ ಖಾದಿ (ಅಂದರೆ ಖಾದಿ ಧಾರಿ) ದೇಶಕ್ಕೆ ಮಾಡಬಾರದ್ದನ್ನೆಲ್ಲಾ ಮಾಡಿತು.

ಲಾಲ್ ಬಹುದ್ದೂರ್ ಶಾಸ್ತ್ರಿಯಂತಹ ಹಲವು ಮಂದಿ ಖಾದಿ ಬೆಲೆ ಕಾಪಾಡಿದರು. ಆದರೇನು ಅವರ ಸಂಖ್ಯೆ ಬೆರಳೆಣಿಕೆಯಷ್ಟು. ಖಾದಿ ತೊಟ್ಟ ನಾಯಿಕೊಡೆಗಳು ಹಳ್ಳಿ-ದಿಲ್ಲಿ, ಬೆಟ್ಟ-ಗುಡ್ಡ, ಗಟಾರ ಚರಂಡಿಗಳಲ್ಲಿ ಹುಟ್ಟಿಕೊಂಡರು. ಗಾಂಧಿ ತತ್ವಕೊಂದು, ಭಾರತದ ಪ್ರಜಾತಂತ್ರ ಧೂಳಿಪಟ ಮಾಡಿದರು. ಆದರ್ಶಗಳು ಮಣ್ಣುಪಾಲಾದವು.

**ಶಿಕ್ಷಣ ಪ್ರಗತಿ ಎಂತಾಗಿದೆ ?**

ಭಾರತೀಯರು ಮೊದಲಿಗಿನ್ನ ಅಕ್ಷರಸ್ತರಾಗಿದ್ದೇವೆ ನಿಜ. ನಮ್ಮ ಮಕ್ಕಳಕೈಲಿ ಓದಿದ ಕುರುಹಾಗಿ ಸರ್ಟಿಫಿಕೇಟ್‌ಗಳಿವೆ, ಶಿಕ್ಷಣ ಮಾರಾಟದ ವಸ್ತುವಾಗಿವೆ, ಬಡವ-ಬಲ್ಲಿದ ಶಾಲೆಗಳು ಹುಟ್ಟಿವೆ. ಪಾಶ್ಚಾತ್ಯಗಾಳಿ ತಂದಿವೆ. ಹಣಗಳಿಕೆ ಮುಖ್ಯವಾಗಿದೆ. ಅಷ್ಟಿಷ್ಟು ಸುಧಾರಣೆ ಕಂಡಿದ್ದರೂ ಓದಿದವ ದುಡಿದು ತಿನ್ನುವ ಮನೋಧರ್ಮ ಮೂಡಿಸದೆ, ಅವನ ಬದುಕಿಗೆ ಬೇಕಾಗದ ಶಿಕ್ಷಣ ನೀಡಿ, ನಿರುದ್ಯೋಗಿಗಳ ಆಗರವಾಗಿಸಿದೆ. ಶಿಕ್ಷಣದ ಪ್ರಗತಿ ಅಧೋಗತಿ ಎಂದು ಉತ್ತರಿಸಿದರೆ ಸರಿಕಂಡೀತು.

**ದೇಹ ಬೆಳವಣಿಗೆ ಎಂತಿದೆ ?**

ಭಾರತೀಯರ ಕೆಲವೇ ದೇಹಗಳು ಸುಪುಷ್ಟವಾಗಿ ಬೆಳೆದಿವೆ. ಕೋಮಲವಾಗಿವೆ. ಶ್ರಮವನ್ನೇ ಕಂಡಿಲ್ಲ, ಭವ್ಯ ಭವನಗಳಲ್ಲಿ, ತಂಪು ಹವೆಯಲ್ಲಿ, ಕಾರ-ಲಾರಿಗಳೊಂದಿಗೆ, ಭೋಗವಸ್ತುಗಳೊಂದಿಗೆ ಐಷಾರಾಮ ಬದುಕು ದೂಡುತ್ತಾ ಇವೆ, ಉಂಡ ಅನ್ನ ಕರಗಲು ಮಾತ್ರೆ ನುಂಗುತ್ತಿವೆ.

ಇನ್ನೊಂದೆಡೆ ಬಹು ದೇಹಗಳು ಅನ್ನವಿಲ್ಲದೆ ಸೊರಗುತ್ತಿವೆ. ಅವರ ಮನೆಗಳು ಕಾಯಿಲೆ ಕೇಂದ್ರಗಳಾಗಿವೆ. ಇರಲು ನೆರಳಿಲ್ಲ, ಮನಕ್ಕೆ ನೆಮ್ಮದಿ ಇಲ್ಲ, ನಾಯಿ-ನರಿಗಳಂತೆ ಕಾಲದೂಡುತ್ತಿವೆ. ಅಲೆಮಾರಿಗಳ ತಂಡ ಇನ್ನೂ ಜೀವಂತವಾಗಿವೆ. ಅನಾಗರಿಕತೆಯ ಮಬ್ಬಿನಲ್ಲಿ ಇವರ ದೇಹಗಳು ಬಡಕಲಾಗಿವೆ. ಆರೋಗ್ಯ ಕೇಂದ್ರಗಳು ಅಮಾನವೀಯತೆಯ ತಾಣಗಳಾಗಿವೆ. ದೇಹ ಬೆಳವಣಿಗೆ ಕುಂಟಿತವಾಗಿದೆ. ಬಿಸಿಲ ಝಳಕ್ಕೆ ಬಾಡಿದ ಸಸಿಗಳಂತಾಗಿವೆ.

**ಬುದ್ಧಿ-ಮನಸ್ಸು ಬೆಳವಣಿಗೆ ಆಗಿದೆಯೆ ?**

ಒಂದಿಷ್ಟು ಆಗಿದೆ.,ಬುದ್ಧಿ ಜೀವಿಗಳಿದ್ದಾರೆ. ನಿರ್ಮಲ ಮನಸ್ಸಿನವರು ಇದ್ದಾರೆ.



ಆದರೆ ಬುದ್ಧಿ-ಮನಸ್ಸು ಶುದ್ಧವಾಗುವ ವಾತಾವರಣ ರಾಷ್ಟ್ರದಲ್ಲಿ ಇಲ್ಲ, ಸರ್ಕಾರದ ಎಲ್ಲಾ ಇಲಾಖೆಗಳು ಸೇವೆಯಲ್ಲಿ ಹಿನ್ನಡೆ ಸಾಧಿಸಿದರೂ ಅಬಕಾರಿ ಇಲಾಖೆ ಮುನ್ನಡೆ ಸಾಧಿಸಿದೆ. ನಗರ, ಹಳ್ಳಿ, ಬೀದಿ, ಗಲ್ಲಿಗಲ್ಲಿಗಳಲ್ಲಿ ಕುಡಿತದ ಅಂಗಡಿ ತೆರೆದಿವೆ. ಧಾರಾಳವಾಗಿ ಆಧುನೀಕರಣ ಹೊಂದಿದ ಬಾರ್‌ಗಳು 24ಘಂಟೆ ಬಾಗಿಲು ತೆರೆದು ವಹಿವಾಟು ನಡೆಸುತ್ತಿವೆ. ಎಲ್ಲಾ ಪಾದಚಾರಿ ರಸ್ತೆಗಳಲ್ಲೂ, ಸಣ್ಣಪುಟ್ಟ ಅಂಗಡಿಗಳಲ್ಲೂ ಪಾನ್ ಪರಾಗ್, ಗುಟಕಾ, ಬೀಡಿ, ಸಿಗರೇಟು ಧಾರಾಳವಾಗಿ ದೊರಕುತ್ತವೆ. ಇದರ ಜೊತೆಗೆ ಬ್ರೌನ್ ಶುಗರ್, ಗಾಂಜಾ, ಮಾತ್ರೆ, ಚರಸ್, ಹೇರಾಯಿನ್ ಮುಂತಾದ ಮಾದಕ ಪದಾರ್ಥಗಳು ಲಭಿಸುತ್ತಿವೆ. ಲಾಟರಿ ಮುಕ್ತವಾಗಿ ನಡೆಯುತ್ತಿದೆ. ಕ್ಲಬ್‌ಗಳು ಇಡೀದಿನ ನಡೆದು ಮನರಂಜನೆ ನೀಡುತ್ತಿವೆ. ಲೈವ್‌ಬ್ಯಾಂಡ್, ಕ್ಯಾಬರೆ ಅಂತಹ ಅಪ್ಪಟ ಮನರಂಜನೆ ದೊರಕುತ್ತಿವೆ. “ಹಣ” ಹೇಗೋ, ಎಂತೋ ಗಳಿಸಿ ತಂದರೆ ಸ್ವರ್ಗಸುಖ ಪಡುವಷ್ಟು ವಾತಾವರಣ ಮೂಡಿದೆ. ನಗರಗಳಲ್ಲಿ ಸಾಕಷ್ಟು ವೇಶ್ಯವಾಟಿಕೆಗಳಿವೆ. ಫರ್‌ವಾಲಿಗಳ ಮನೆಗಳು ಮಿನಿ ವಿಧಾನಸೌಧವಾಗಿವೆ. ಉತ್ತಮ ಪ್ರವಾಸಿ ಕೇಂದ್ರಗಳಾಗಿವೆ. ಶಾಲೆ ಪಕ್ಕಗಳಲ್ಲಿ ಈ ಎಲ್ಲಾ ಸೌಲಭ್ಯಗಳು ಇವೆ.

ಇಂತಹ ವಾತಾವರಣದಲ್ಲಿ ಭಾರತೀಯರ ಬುದ್ಧಿ-ಮನಸ್ಸುಗಳು ಹೇಗೆ ಬೆಳೆದಿದೆ ನೀವೇ ಯೋಚಿಸಿ ಹೇಳಿ. ದಿನ ನಿತ್ಯ ಕೊಲೆ, ಸುಲಿಗೆ, ರಕ್ತಪಾತ, ದರೋಡೆ, ಮುಷ್ಕರ, ಮತೀಯ ಗಲಭೆ ನೋಡುವಾಗ ಬುದ್ಧಿ ಚಿಗುರೀತೆ? ಮನಸ್ಸು ಅರಳೀತೆ? ಆಡಳಿತ ಎಂತಿದೆ?

ದೇಶದಲ್ಲಿ ಪ್ರಾಮಾಣಿಕತೆಯೆಂಬುದನ್ನು, ಕರ್ತವ್ಯಪಾಲನೆ ಎಂಬುದನ್ನು ಹಗಲಿನಲ್ಲೂ ಬ್ಯಾಟರಿ ಹಿಡಿದು ಹುಡುಕಿದರೂ ಸಿಗದು. ಕಛೇರಿಗಳಲ್ಲಿ ಅನಾಯಕತ್ವ ತಾಂಡವಾಡುತ್ತಿದೆ, ಲಂಚಮಯವಾಗಿದೆ. ಭ್ರಷ್ಟಾಚಾರ - ಅನಾಚಾರಗಳ ಕೂಪವಾಗಿವೆ, ನೌಕರರಿಗೆ ತಮ್ಮ ವೃತ್ತಿಯಲ್ಲಿ ತೃಪ್ತಿಯಿಲ್ಲ-ನೆಮ್ಮದಿ ಇಲ್ಲ. ಕೆಲಸ ಮಂದಗತಿಯಲ್ಲಿ ಸಾಗಿದೆ. ದುರಾಡಳಿತ ಜನರನ್ನು ಬೇಟೆಯಾಡುತ್ತಿದೆ.

ಜನರೂ ಸಹ ಲಂಚ ನೀಡಲು ಮುಂದಾಗಿದ್ದಾರೆ. ಹಣ ನೀಡಿ ಎಂತಹ ಕೆಲಸವನ್ನಾದರೂ ಅಕ್ರಮದಿಂದ ಮಾಡಿಸುತ್ತಿದ್ದಾರೆ. ಹಣವಿಲ್ಲದ ಭಾರತೀಯ ಹೆಣವೇಸರಿ. ಬದುಕಿ ಸತ್ತಂತ ಸ್ಥಿತಿ ಅವನದು.

ಶಿಕ್ಷಣ ಬಹು ಪ್ರಮುಖವಾದುದು. ಅದಕ್ಕೆ ತಾತ್ವಿಕ ನೆಲೆ ಸಿಕ್ಕಿಲ್ಲ, ನೈತಿಕತೆ ಕೀಳು ಮನರಂಜನಾ ಮಾಧ್ಯಮಗಳಿಂದ ಅಧಃಪತನ ಹೊಂದಿದೆ, ಪೋಲೀಸ್‌ಠಾಣೆಗಳು ನರಕದ ಬ್ರಾಂಚ್‌ಗಳಾಗಿವೆ. ಸಾರಿಗೆಇಲಾಖೆ ಸೋರುವ ಇಲಾಖೆಗಳಾಗಿವೆ, ಸಂಸ್ಕೃತಿ ಇಲಾಖೆ ಅಸಂಸ್ಕೃತಿ ಕೇಂದ್ರವಾಗಿದೆ.

ಮರಗಳನ್ನು ಕಡಿದು ಗಿಡಗಳನ್ನು ನೆಡುವ ನೀತಿ ನಮ್ಮದಾಗಿ ಅರಣ್ಯ-ಹಾಳಾಯಿತು. ಮಿತಿ-ಮೀರಿದ ಕಾರ್ಖಾನೆಗಳಿಂದ ವಾಯು ಮಾಲಿನ್ಯವಾಯಿತು.

ಪರಿಸರ ಕೆಟ್ಟಿತು. ಭಾರತೀಯ ಇಂದು ವಿಷದ ನೀರುಕುಡಿದು, ವಿಷದ ಗಾಳಿಕುಡಿದು, ಕಲಬೆರಕೆ ಅನ್ನಉಂಡು, ವಿಷಮಯ ಬದುಕಿನಲ್ಲಿ ನಾಶವಾಗುತ್ತಿದ್ದಾನೆ.

"ಚಿನ್ನದ ಹಬ್ಬ"ದ ಆಚರಣೆ ಮಾಡಲು ನಾಚಿಕೆಯಾಗುವುದಿಲ್ಲವೆ? ಗಾಂಧಿ ಮುಂತಾದ ಮಹಾತ್ಮರ ಹೆಸರೇಳಲು ನಮಗೆ ಮಾನಮರ್ಯಾದೆ ಇದೆಯೇ ರಾಮರಾಜ್ಯದ ಬದಲು ಹರಾಮರಾಜ್ಯ ಮಾಡಿದ ನಾವು ಇನ್ನಾದರು ಜಾಗೃತಿ ಹೊಂದದೆ ಹೋದರೆ, ಸ್ವಾತಂತ್ರ್ಯ ಅರ್ಥಪೂರ್ಣಗೊಳಿಸಿ, ಸರ್ವರಿಗೂ ಆದರ ಫಲ ಮುಟ್ಟಿಸಲು ಹೋರಾಟ ಮಾಡದೆ ಹೋದರೆ ನಮ್ಮ ವಿನಾಶಕ್ಕೆ ನಾವೇ ದಾರಿ ಮಾಡಿಕೊಂಡಂತಾಗುತ್ತದೆ. ಆಳುವ ಮಹಾಪ್ರಭುಗಳನ್ನು ಕಂಡಾಗ ಏನನ್ನಿಸುತ್ತದೆ?

ಅತೀವ ದುಃಖವಾಗುತ್ತಿದೆ. ಬುದ್ಧ, ಅಶೋಕ, ಬಸವ, ಮಹಾವೀರರು, ಗಾಂಧಿ, ವಿವೇಕಾನಂದರ ನಾಡು ಹೃದಯ ಹೀನ ಮಹಾಪ್ರಭುಗಳಾದ ನಮ್ಮ ರಾಜ-ರಾಜಕಾರಣಿಗಳ ಕಪಿಮುಷ್ಠಿಯಲ್ಲಿದೆ. ದೇಶದ ಸಂಪತ್ತು ಮಾರಿದರು. ಮಹಾನ್ ಸಂಸ್ಕೃತಿ ಮಣ್ಣುಪಾಲು ಮಾಡಿದರು. ನಾಗರೀಕತೆ ನೆಲೆಗೆಡಿಸಿದರು. ಶಿಕ್ಷಣದ ಹೆಸರಲ್ಲಿ ನಿರುದ್ಯೋಗ ಬೆಳೆಸಿದರು, ಸಮಾನತೆ ಹೆಸರಲಿ ಮುಂದುವರಿದ-ಹಿಂದುಳಿದ ಜಾತಿ ಎಂದು ಭಾರತೀಯರನ್ನು ಕತ್ತರಿಸಿದರು. ವಿಜ್ಞಾನದ ಹೆಸರಲ್ಲಿ ಧರ್ಮದ ಕಲ್ಪವೃಕ್ಷ ಕತ್ತರಿಸಿದರು. ಶ್ರಮವಿಲ್ಲದ ಗಳಿಕೆ ಗಳಿಸಲು ಲಂಚ, ಭ್ರಷ್ಟಾಚಾರ, ಅನಾಚಾರ ಆರಂಭಿಸಿದರು, ಭಾರತದ ಧರ್ಮ, ಸಂಸ್ಕೃತಿ, ನೆಲ-ಹೊಲ-ಜಲ-ಬಂಡೆ ವಿದೇಶಿಯರಿಗೆ ಮಾರಿದರು. ಕೈಗಾರಿಕೋದ್ಯಮದ ಹೆಸರಲ್ಲಿ ಜನರ ಆಶಾಭಾವನೆ ಹಾಡುಗೆಡವಿದರು.

ದೇಶದ ಅಂತಃಸತ್ವ ಮಾರಿದ ರಾಜಕಾರಣಿಗಳು ಇನ್ನು ಭಾರತವನ್ನು ಮಾರುವುದೊಂದಿದೆ. ಭಾರತೀಯರೇ ವರಕವಿ ದ. ರಾ. ಬೇಂದ್ರೆ ಅವರ ಕವಿತೆಯನ್ನು ನೆನಪು ಮಾಡಿಕೊಳ್ಳಿ.

" ಹೋರಾಟವು ಇನ್ನೂ ಇದೆ: ಇನ್ನೂ ಇದೆ ಸಾಧನಾ
ಮುಕ್ತರಾದ ಪ್ರಜೆಗಳಿಗೂ ಧರ್ಮದ ಆರಾಧನಾ
ಸ್ವೈರತೆಗೂ ಸ್ವಾತಂತ್ರ್ಯಕು ಇಹುದು ಅಜಗಜಾಂತರಾ
ಸುವ್ಯವಸ್ಥೆ ಮಹಾತಂತ್ರ, ಬದ್ಧತೆ ಬರಿಯಂತರಾ "

ಸ್ವಾತಂತ್ರ್ಯ ಬಂದಿದೆ, ತ್ರಿವರ್ಣಧ್ವಜ ಹಾರಿದೆ, ಗಣತಂತ್ರ ಜಾರಿಯಲ್ಲಿದೆ. ಮತದಾನದ ಹಕ್ಕು ಬಂದಿದೆ, ಆದರೆ ಸ್ವೈರತೆಯೇ ಸ್ವಾತಂತ್ರ್ಯವಿಲ್ಲ. ಸುವ್ಯವಸ್ಥೆಯೇ ಮಹಾತಂತ್ರ, ಬದ್ಧತೆ ಎಂಬುದು ಬರಿ ಯಾಂತ್ರಿಕವಾಗಿದೆ. ಸ್ವಾತಂತ್ರ್ಯಫಲ ಎಲ್ಲರಿಗೂ ಮುಟ್ಟಿಲ್ಲ. ಸರ್ವರಿಗೂ ಧರ್ಮದ ಆರಾಧನೆ ಆಗಿಲ್ಲ. ಅದಕ್ಕಾಗಿ ವರ ಕವಿಗಳು " ಹೋರಾಟ ಇನ್ನೂ ಇದೆ, ಇನ್ನೂ ಇದೆ ಸಾಧನೆ" ಎಂದು ಎಚ್ಚರಿಸಿದ್ದಾರೆ.

ಸ್ವಾತಂತ್ರ್ಯ ಅರ್ಥಪೂರ್ಣವಾಗಲು ಹೋರಾಡಿ
ಸಾಧನೆ ಸಮಗ್ರವಾಗಲು ಹೋರಾಡಿ
ಮಿಡಿಯಲಿ ಸ್ವಾತಂತ್ರ್ಯದ ಜನನಾಡಿ
ಏಳಿ, ಎದ್ದೇಳಿ, ಗುರಿ ಮುಟ್ಟುವನಕ ಹೋರಾಡಿ.

# ಶರಣೆಯರ ಮನದ ದುಗುಡ

ಲೇಖಕಿ: ರಾಜೇಂದ್ರಶಿಶು, 242, ಉತ್ತರಾದಿಮಠದ ರಸ್ತೆ, ಮೈಸೂರು-4.

"ನಾನಾರ ಹೆಸರ ಕುರುಹಿಡಿಯಲಯ್ಯ ಬಸವಾ?
ನಾನಾರ ರೂಪ ನಿಜವಿಡಿಯಲಯ್ಯ ಬಸವಾ ?
ನಾನಾರ ಮಾತ ನೆಲೆಗೊಳಿಸಲಯ್ಯ ಬಸವಾ
ನಾನಾರ ಮನವನಂಗೈಸಲಯ್ಯ ಬಸವಾ ?
ಎನ್ನ ಸುಖಾಕಾರ ಮೂರ್ತಿ ಬಸವನಡಗಿದ ಬಳಿಕ
ಎನಗೆ ಹೆಸರಿಲ್ಲ, ರೂಪನಿರೂಪವಾಯಿತ್ತಯ್ಯ
ಸಂಗಯ್ಯ; ಬಸವನಡಗಿದ ಬಳಿಕ"

ಹೊಸಪರಿಯ ತೊಳಲಿಕೆಯ ನುಡಿ ಕೇಳಿ ಮನಬೆಚ್ಚಿತು ಮರಣವೇ ಮಹಾನವಮಿ ಎಂದರಿತ, ಮಹದ ಮಹಂತರಾದ ಕಾಯಕ ದೀಪ್ತಿಗಳಾಗಿ ಬೆಳಗಿದ, ಬಸವ ಬೆಳಗಿನಲ್ಲಿ ಮಿಂದು ಪುನೀತರಾದ ಶರಣೆಯರನುಡಿಕೇಳಿ ಕ್ಷಣ ಮನ ಮೌನವಾಯಿತು.

ಎಲ್ಲವನ್ನು ಮೆಟ್ಟಿನಿಂತ ಧೀರರು ಕೂಡ ಒಮ್ಮೊಮ್ಮೆ ತಮ್ಮ ಅಂತರಾಳದಲ್ಲಿ ಹುದುಗಿದ ನೋವಿನ ಆರ್ಭಟಕ್ಕೆ ಓಗೊಡುತ್ತಾರೆ. ಆ ನೋವಿನ ಅಲೆಗಳ ಅಪ್ಪಳಿಸುವಿಕೆಗೆ ಸಿಲುಕುತ್ತಾರೆ. ಆದರೆ ಆಕ್ಷಣ ಅದನ್ನು ಮೆಟ್ಟಿನಿಲ್ಲುತ್ತಾರೆ. ನಾವು ಅದರಲ್ಲಿ ಮುಳುಗಿರುತ್ತೇವೆ. ನಮ್ಮಂತೆ ಮುಳುಗದೆ ಕ್ಷಣ ಧೃತಿಗೆಟ್ಟಂತೆ ಕಂಡರೂ ಧೃತಿಗೆಡದೆ ಅಶಾಶ್ವತೆಯನ್ನರಿತು ಬಯಲಲ್ಲಿ ಬಯಲಾಗಿನಿಂತು ಮಹಂತರಾಗುತ್ತಾರೆ. ಮರಣವೇ ಮಹಾನವಮಿ "ಜಾತಸ್ಯಂ ಮರಣಂ ಧೃವಂ" "ಉರಿಬರಲಿ ಸಿರಿಬರಲಿ ಬೇಕು ಬೇಡೆನ್ನನು" ಎಂಬ ಅಮೂಲ್ಯವಾಣಿ ಅದ್ದರಿಂದಲೇ ಮುಳಗಿದುದು. ಆದರೂ ಅವರ ವಚನಗಳನ್ನು ಓದುತ್ತ ಹೋದಂತೆ ಪತಿಯನ್ನು ಕಳೆದು ಕೊಂಡಾಗ, ಸೋದರರನ್ನು ಕಳೆದುಕೊಂಡಾಗ ಅಗಲಿಕೆಯ ದಳ್ಳುರಿ ಮನದ ದಳ್ಳುರಿಮೂಲೆಯಲ್ಲಿ ಅಡಗಿರಲಾರದೆ ವಚನದರೂಪಾಗಿ ಹೊರ ಹೊಮ್ಮಿರಬೇಕು ಅವರ ಮನದಳಲಿನ ಸೂಕ್ಷ್ಮ ಎಳೆಯನ್ನು ಇಲ್ಲಿ ವ್ಯಕ್ತಪಡಿಸುವ ಪ್ರಯತ್ನ ನನ್ನದು.

ಕಲ್ಯಾಣ ಕ್ರಾಂತಿಯಿಂ ಪ್ರಣತೆ ಒಡೆಯಿತು ತೈಲ ತೀರಿತ್ತು ಜ್ಯೋತಿ ನಂದಿತ್ತು. ಆ ತಾಣವ ಕೈಲಾಸವಾಗಿಸಿದ ಜಗಜ್ಯೋತಿಯಾಗಿ ಪ್ರಜ್ವಲಿಸಿದ್ದ ಬಸವಣ್ಣ ಅತಿನೊಂದು ಸಾಕು ಮಾಡೈ ತಂಡೆ ಲೋಕದಾಟವನಿನ್ನು ತೆರಪು ಕೊಡು ತಂದೆ ಬಂದಿಹೆನುನೊಂದು.

ಎಂದು ಸಂಗಯ್ಯನಲ್ಲಿ ಬೇಡಲು ತನ್ನ ಮಗನನ್ನು ಬೆಂಬಿಡದೆ ರಕ್ಷಿಸಿದ ಸಂಗಮನಾಥ ತನ್ನಲ್ಲವನನಿಂಬಿಟ್ಟು ಕೊಂಡ, ಆಗ ಅಲ್ಲಿರ್ಪ ಸಂಗಯ್ಯ ಇಲ್ಲಿಲ್ಲವೆ

ಎಂದು ಪತಿ ಕರೆಕಳಿಸಿದಾಗ ದಿಟ್ಟತನದ ಉತ್ತರವಿತ್ತು. ಅಣ್ಣನಿಗೂ ಒಂದು ಹೆಜ್ಜೆ ಆಧ್ಯಾತ್ಮದಲ್ಲಿ ಮುಂದಿದ್ದ ಸತಿ ನೀಲಲೋಚನೆ ಮನತಡೆಯದೆ ಅಣ್ಣನ ಬಳಿ ಹೊರಡುತ್ತಾರೆ. ತಂಗಡಗಿ ಬರುವಷ್ಟರಲ್ಲಿ ಅಣ್ಣ ಬಯಲಾದ ಸುದ್ಧಿ ತಿಳಿದು ತಾನು ಅಲ್ಲಿಯೇ ಐಕ್ಯರಾಗುತ್ತಾರೆ. ಅಣ್ಣನು ಬಯಲಲ್ಲಿ ಬಯಲಾದ ವಿಷಯ ತಿಳಿದಕ್ಷಣ ಅಳಲುರಿಯ ನೋವು ಅವರ ವಚನಗಳ ರೂಪವಾಗಿ ಹೊರ ಹೊಮ್ಮಿದೆ.

ಅವರೀರ್ವರ ದಾಂಪತ್ಯ ಹೇಗಿತ್ತು ? ನಿಜಕ್ಕೂ ಅಚ್ಚರಿ. ಲೋಕದ ಕಂಗಳಿಗೆ ಸತಿ-ಪತಿ ಇವರು ಆದರೆ ಅಂತರಂಗದಿ ? ಆಕೆಯ ಬಾಯಿಂದಲೇ ಕೇಳಿ.

ಮಡದಿ ಎನಲಾಗದು ಬಸವಂಗೆ ಎನ್ನನು ;<br>
ಪುರುಷ ಎನಲಾಗದು ಬಸವಣ್ಣ ನಿನಗೆ ;<br>
ಉಭಯ ಕುಳವಳಿದು ಬಸವಂಗೆ ಶಿಶುವಾದೆ<br>
ಬಸವಣ್ಣ ಎನಗೆ ಶಿಶು ಮಗನಾದ ನವ್ವ

ಎಂಥ ಭಾವನೆ! ಈಕೆಯ ಜೀವನದಲ್ಲಿ ಬಸವನಿಲ್ಲದೆ ಅನ್ಯವಿಲ್ಲ "ಸರ್ವಂ ಬಸವಮಯಂ ಜಗತ್ ಎಂಬಂತೆ ಎಲ್ಲೆಡೆ ಬಸವನನ್ನೆ ಕಂಡವಳು

"ಎನಗೆ ಲಿಂಗವು ನೀನೇ ಬಸವಯ್ಯ<br>
ಎನಗೆ ಸಂಗವು ನೀನೇ ಬಸವಯ್ಯ<br>
ಎನಗೆ ಪ್ರಾಣವು ನೀನೇ ಬಸವಯ್ಯ<br>
ಎನಗೆ ಪ್ರಸಾದ ನೀನೇ ಬಸವಯ್ಯ<br>
ಎನಗೆ ಪ್ರಭೆಯ ಮೂರ್ತಿಯು ನೀನೆ ಬಸವಯ್ಯ<br>
ಎನಗೆ ಸಂಗಯ್ಯ ನೀನೆ ಬಸವಯ್ಯ

ಆತನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟಳು, ಮಹಾಮನೆಯ ಬೆಳಕಾದಳು, ಅಣ್ಣನ ಕಣ್ಣ ಮಿಂಚಾದಳು. ಇಂಥ ಸುಂದರ ಸಂಸಾರದಲ್ಲಿ ಅಣ್ಣ ಆಕೆಯನ್ನು ಬಿಟ್ಟುತೆರಳಿದ ಆ ಕ್ಷಣ ಅವಳು ದಿಕ್ಕು ತಪ್ಪಿದಂತಾಗಿರಬೇಕು.

"ಅಟ್ಟಡವಿಯಲ್ಲಿ ಬಿಟ್ಟು ಹೋದಿರಿ ಬಸವಾ<br>
ನಟ್ಟನಡು ಗ್ರಾಮವ ಕೆಡಿಸಿ ಹೋದಿರಿ ಬಸವಾ

ನೋವು ಹೊನಲಾಗಿ ಹರಿಯಿತು. ಡಾ|| ಪ್ರಭು ಪ್ರಸಾದ್ ಹೇಳುವಂತೆ "ಈ ಶೋಕ ಗೀತೆ ಕನ್ನಡ ಸಾಹಿತ್ಯದಲ್ಲಿ ಮೊಟ್ಟ ಮೊದಲ ಶೋಕಗೀತೆಯಿದು. ಹೃದಯಾಂತ ರಾಳದಿಂದ ಹೊರಹೊಮ್ಮಿದ ನೋವಿನ ನುಡಿ ಇದು.



ಎಲ್ಲೆಡೆ ಬಸವನನ್ನು ಅರಸುತ್ತಾಳೆ ಆ ಶರಣೆ ಎಲೆ ಅಯ್ಯಾಗಳಿರಾ ಎಲೆ ವೃಕ್ಷಗಳಿರಾ, ಕಂಡಿರೇ ಬಸವನ ? ಎಲೆ ಅಯ್ಯಗಳಿರಾ ರೂಹಿಲ್ಲದ ಚೋಹನ ಕಂಡಿರೆ ಬಸವನ ಎಲೆ ಸ್ವಾಮಿಗಳಿರಾ ನಿಮ್ಮ ನಿಲುವಿನ ದರ್ಪಣವ ಕಂಡಿರೆ ಬಸವನ ಸಂಗಯ್ಯನಲ್ಲಿ ಸ್ವಯವಳಿದ ಬಸವನ

ಕುರುಹ ಕಂಡಿರೆ?- ಎಂದು ಸಚರಾಚರವನ್ನು ಕೇಳುತ್ತಾಳೆ. ಬಸವಣ್ಣ ನಿಲ್ಲದೆ ಅವಳಿಗೆ ಬಾಳಿಲ್ಲ ಬೇರೆ ಅಸ್ತಿತ್ವವಿಲ್ಲ. ಅಂತೆ ಹೇಳುತ್ತಾಳೆ.

ಎಲೆಯಳಿದ ಮರದಲ್ಲಿ ನೆಳಲನರಸಲಿಲ್ಲ<br>
ಕಳೆಯಾರಿದ ದೀಪದಲ್ಲಿ ಬೆಳಗನರಸಲಿಲ್ಲ<br>
ಶಬ್ದವಡಗಿ ನಿಶ್ಶಬ್ದವಾದ ಬಸವನಲ್ಲಿ ಶಬ್ದ ವರಸಲಿಲ್ಲ

ಆಸಂಗಯ್ಯನಲ್ಲಿ ಬಸವಣ್ಣ ಸೇರ್ದ ಬಳಿಕ ನಾನಾರ ಕುರುಹಿಡಿಯಲಯ್ಯ ........ಹೀಗೆ ಆಕೆಯ ಮನದ ಅಂತರಂಗದ ಅಳಲು ಶೋಕಗೀತೆಯಾಗಿ ಹೊಮ್ಮಿದೆ. ಆದರೆ ಆಕೆ ಅದರಲ್ಲಿಯೇ ಆಕೆ ಮುಳುಗದೆ ಅದನ್ನು ಮೀರಿ ನಿಲುವ ಪರಿತೋರಿದಳು. ಹುಟ್ಟು ಬಂಜೆಗೆ ಮಕ್ಕಳ ಫಲಕೊಟ್ಟದ್ದ ಬಸವ. ಹೆಣ್ಣ ಕಂಗಳಲ್ಲಿ ನಗೆಯ ಹೂ ಚಿಮ್ಮಿಸಿದ. ಈತನ ಅಗಲಿಕೆಯಿಂದ ಮಹಾಮನೆ ಶೂನ್ಯವಾಯಿತು. ನೀನಗಲಿದಡೆ ನಾನೆಂತಗಲುವೆನಯ್ಯ, ಎಂದು ಹೇಳುತ್ತ

ಬಸವಾ ಬಸವಾ ಬಸವ ಎಂಬ ಶಬ್ದವಡಗಿತ್ತು<br>
ಬಸವಾ ಬಸವಾ ಬಸವಾ ಎಂಬ ರೂಪನಿರೂಪವಾಗಿತ್ತು<br>
ಬಸವನ ಕಾಯವಳಿದು ನಿರಾಕುಳವಾಗಲು<br>
ಆನು ಬಸವಾ ಬಸವಾ ಬಸವಾ ಎಂದು ಬಯಲಾದೆನಯ್ಯ

ಎಂದು ಬಸವ ಎನ್ನುತ್ತಲೇ ಬಯಲಾದಳು ಆ ತಾಯಿ ನೀಲಲೋಚನೆ ಎಂಥ ಮಧುರ ದಾಂಪತ್ಯ. ಅಚ್ಚರಿ ಆಗುತ್ತದೆ.

ಇಂದಿನ ಜನರ ಪರಿ ಕಂಡಾಗ ನಿಜಕ್ಕೂ ಅಚ್ಚರಿ ವಿವಾಹವಾದ ವರುಷದಲ್ಲಿ ಸಂಸಾರ ನಿಸ್ಸಾರವಾಗಿ ಹೊಂದಾಣಿಕೆಯಿಲ್ಲದೆ ವಿಚ್ಛೇದನ ಪಡೆವ ಜನರೆಷ್ಟೊ ತನ್ನ ಸ್ವಾರ್ಥಕ್ಕಾಗಿ ಪತಿಯನ್ನು ಪ್ರೀತಿಸುವ ರೀತಿ ನಾಟಕ ಹೂಡುವ ಹೆಣ್ಣುಮಕ್ಕಳೆಷ್ಟೊ ಶ್ರೀ ಸಿದ್ದೇಶ್ವರ ಸ್ವಾಮಿಗಳು ಹೇಳುತಿದ್ದ ಕಥೆ ಇಲ್ಲಿ ನೆನಪಾಗುತ್ತಿದೆ.

ಒಬ್ಬವ್ಯಕ್ತಿ ಮಡದಿ ಮಕ್ಕಳ ಬಗ್ಗೆ ಅತೀವವಾದ ಕುರಡು ಪ್ರೇಮ ದೇವರ ಬಗ್ಗೆ ಆಲೋಚನೆಯಿಲ್ಲ ಸದಾ ತನ್ನ ಪತ್ನಿ ಪುತ್ರರಿಗಾಗಿ ದುಡಿಯುತ್ತ ಇದ್ದನು.ಒಮ್ಮೆ ಗುರುಗಳ ಬಳಿ ಬರುತ್ತಾನೆ. ಗುರುಗಳು ದೇವರ ಬಗ್ಗೆ ಮಾತನಾಡುತ್ತ ಐಹಿಕ ಜಗತ್ತಿನ ಸ್ಥಿತಿ ತಿಳಿಸಿ ಆತನಿಗೂ ಉಪದೇಶಿಸುತ್ತಾರೆ ಆತ ಹೇಳುತ್ತಾನೆ ನಿಮ್ಮ ದೇವರು ನಿಮ್ಮಲ್ಲಿ ಇರಲಿ

ನನ್ನ ಸಂಸಾರ ಸುಂದರ. ಪ್ರೀತಿಯ ವಾಹಿನಿ ಹರಿವುದು ನನಗೇನಾದರು ಆದಲ್ಲಿ ನನ್ನ ಪತ್ನಿ ಪುತ್ರರು ಹಿಂಬಾಲಿಸುವರು. ಅಷ್ಟು ವ್ಯಾಮೋಹ ಎಂದ ಆದನ್ನು ಕಂಡು ಗುರುಗಳು ಹೇಳಿದರು. ಹೌದು ಮಗು ಹಾಗಾದರೆ ಇದನ್ನು ಪರೀಕ್ಷಿಸೋಣ ನೀನು ಸತ್ತಂತೆ ಮಲಗಿ ಬಿಡು. ನಂತರ ಪರೀಕ್ಷಿಸುವೆ ಎಂದರು. ಆತ ಅದೇ ವರ್ಷ ಹೊಸಮನೆ ಕಟ್ಟಿದ್ದ. ಮನೆಗೆ ಬಂದು ಮಲಗಿದ ಸತ್ತಂತೆ ಮಲಗಿದ. ಹೆಂಡತಿ ಮಕ್ಕಳೆಲ್ಲರ ದುಃಖ ಹೇಳತೀರದು. ಗುರುಗಳು ಆಗಮಿಸಿದರು ಅಲ್ಲಿಗೆ. ಆತನ ಹೆಂಡತಿ ಮಕ್ಕಳಂತು ಗುರುಗಳ ಕಾಲಿಡಿದು ಅಳಲು ಪ್ರಾರಂಭಿಸಿದರು. ಗುರುಗಳು ಹೇಳಿದರು ನಿಮ್ಮ ದುಃಖ ನಾನು ನೋಡಲಾಗುತ್ತಿಲ್ಲ ನಿಮ್ಮಲ್ಲಿ ಯಾರಾದರು ನಿಮ್ಮ ಪ್ರಾಣಕೊಟ್ಟಲ್ಲಿ ಆತನನ್ನು ಬದುಕಿಸುವೆ ಎಂದರು. ಆಗ ಎಲ್ಲರೂ ಮೌನ ಆತನ ಪತ್ನಿಯನ್ನು ಕೇಳಿದರು ನಿನ್ನ ಪ್ರಾಣ ಕೊಡುವೆಯಾ ತಾಯಿ. ಎಂದು ಆಕೆ ಹೇಳಿದಳು ಅಯ್ಯೋ ನನ್ನ ಮಕ್ಕಳಿನ್ನು ಚಿಕ್ಕವರು ಅವರನ್ನು ನೋಡಿ ಕೊಳ್ಳುವರಾರು ?. ಸತ್ತವರು ಮರಳಿಬಾರರು ನೀವೇ ಹೇಳಿದಿರಲ್ಲ ಗುರುದೇವ. ನಾನು ಹೋಗಿ ಮಕ್ಕಳನ್ನು ಅನಾಥರನ್ನಾಗಿ ಮಾಡಲೆ ? ಎಂದಳು ಮಕ್ಕಳನ್ನು ಕೇಳಿದರು ಅವರು ನಾವಿನ್ನು ಚಿಕ್ಕವರು ನಮ್ಮಪ್ಪ ಸಂಸಾರದಲ್ಲಿ ಎಲ್ಲ ಸುಖ ಅನುಭವಿಸಿದ್ದಾನೆ, ನಾವು ಪ್ರಾಣ ಕೊಟ್ಟು ಯಾವ ಸುಖಪಡೆವೆವು ಆಗದು ಎಂದರು. ಸರಿ ಮಲಗಿದ್ದವನಿಗೆ ಕೋಪ. ಸತ್ತಂತೆ ಬಿದ್ದಾಗ ಆತ ಕೈಕಾಲುಗಳನ್ನು ಹೊರ ಚಾಚಿ ವಕ್ರವಾಗಿ ಬಿದ್ದಿರುತ್ತಾನೆ. ಗುರುಗಳು ಹೇಳಿದರು " ಆಯಿತು ಬಿಡಿ ಹೆಣವನ್ನಾದರು ಹೊರಸಾಗಿಸುವ ಎಂದರು. ಹೊರಗೆ ತೆಗೆದುಕೊಂಡು ಹೋಗಲು ಬಾಗಿಲಿನಿಂದ ವಕ್ರವಾಗಿ ಕೈಕಾಲು ಚಾಚಿದ್ದರಿಂದ ಸಾಧ್ಯವಾಗಲಿಲ್ಲ ಶಿಷ್ಯರನ್ನು ಕರೆದು ಬಾಗಿಲನ್ನು ಸ್ವಲ್ಪ ಹೊಡೆಯಲು ಹೇಳಿದರು. ಅವರು ಹಾರೆಯಿಂದ ಇನ್ನೇನು ಹೊಡೆಯಬೇಕು, ಅಳುತಿದ್ದ ಹೆಂಡತಿ ದಿಗ್ಗನೆ ಬಂದು ಗುರುಗಳೇ ಒಡೆಯಬೇಡಿರಿ. ನಾನು ಆನಂತರ ಏನು ಮಾಡಲಿ ಪುನಃ ಕಟ್ಟಿಸೆ ಹಣ ವ್ಯರ್ಥ. ಸತ್ತವರಂತೂ ಮರಳಿಬಾರರು. ಆ ಕಾರಣ ಆ ಹೆಣದ ಕೈಕಾಲ್ಗಳನ್ನೆ ಕತ್ತರಿಸಿಕೊಂಡೊಯ್ಯಲು ಸುಲಭವಾಗುತ್ತದೆ ಎಂದಳು. ಇದನ್ನು ಕೇಳಿ ಸತ್ತಂತೆ ಬಿದ್ದಿದ್ದ ವ್ಯಕ್ತಿ ಎದ್ದು ಕುಳಿತು ಗುರುವಿಗೆ ನಮಿಸಿ, ಗುರುದೇವ ನನ್ನ ಕಣ್ಣು ತೆರೆಸಿದಿರಿ ಕುರುಡು ವ್ಯಾಮೋಹ ಬಿಡಿಸಿದಿರಿ, ಈ ಹುಸಿ ಪ್ರೀತಿಯ ಸಂಸಾರ ಈದಾಂಪತ್ಯ ಬೇಡ ನಿಮ್ಮೊಡನೆ ಬರುತ್ತೇನೆ ಎಂದು ಹೊರಟನಂತೆ. ಇಂದು ಇಂಥ ದಾಂಪತ್ಯ ಕಾಣುವುದು.

ನೀಲಲೋಚನೆ ಪತಿಯನ್ನು ಅನುಸರಿಸಿದಳು ಉರಿಯುಂಡ ಕರ್ಪೂರವಾದಳು ಅಂಥ ದಾಂಪತ್ಯ ಇದ್ದುದರಿಂದ ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಎಂಬ ವಾಣಿ ನುಡಿದುದು ಅಗಲಿಕೆ ನೋವಿಗೆ ಸತಿ ಪತಿಯ ಬಾಂಧವ್ಯವೇ ಆಗಬೇಕಿಲ್ಲ ಇತ್ತ ನೋಡಿ ಅಣ್ಣನನ್ನ ಕಳೆದು ಕೊಂಡ ತಂಗಿಯ ನೋವಿನ ಬೇಗೆ

ಎನ್ನ ಕಣ್ಣಕಟ್ಟ ಕನ್ನಡಿಯ ತೋರಿತ್ತೊ ಅಜಗಣ್ಣ ನಿನ್ನ ವಿಯೋಗ



ನಿನ್ನ ನುಡಿಯೆಲ್ಲ ಪ್ರತಿಬಿಂಬಗಳಾದವಲ್ಲ, ಅಣ್ಣನಗಲಿಕೆಯಿಂದ ತಳಮಳಗೊಂಡ ತಂಗಿ ಮತ್ತಾರು ಅಲ್ಲ ಜ್ಞಾನನಿಧಿ ಮುಕ್ತಾಯಕ್ಕ ಅಣ್ಣನೇ ಮರೆಯಾದ ಮೇಲೆ ತನಗೆ ಆಧ್ಯಾತ್ಮ ಲೋಕದ ದಾರಿ ತೋರುವವರಾರು ಎಂಬುದು ಅವಳ ವ್ಯಥೆ. ಅಂಗೈಲೊಂದು ಅರಳ್ದ ತಲೆ ಹಿಡಿದು ಕಂಗಳ ಮುತ್ತ ಪವಣಿಸುತ್ತಿರುವ ಈಕೆಯನ್ನು ಸಮಾಧಾನ ಪಡಿಸಲು ಜ್ಞಾನಮೇರು ವೈರಾಗ್ಯ ನಿಧಿ ಪ್ರಭುದೇವರು ಬರಬೇಕಾಯ್ತು. ಅಣ್ಣ ಕೇವಲ ಅಣ್ಣನಾಗಿರದೆ ಗುರುವಾಗಿದ್ದ. ತಂಗಿಯ ಬಾಳದೀಪ್ತಿಯಾಗಿದ್ದ ಗುರುವಿಗಾಗಿ ದುಃಖಿಸಿದವರು ಮುಕ್ತಾಯಿಯೊಬ್ಬಳೇ ಎನ್ನಬಹುದು. ಇಂದು ಗುರುವಿಗೆ ತಿರುಮಂತ್ರ ಹೇಳುವ ಜನತೆ ಈ ಶರಣೆಯತ್ತ ಕ್ಷಣದಿಟ್ಟಿ ಹರಿಸಬೇಕು. ಆಧ್ಯಾತ್ಮದ ದಾಹ ಹಿಂಗಿಸುತ್ತಿದ್ದ ಅಣ್ಣನೇ ಮರೆಯಾದ ಮೇಲೆ ತನಗಿನ್ನಾರೂ ಗತಿ. ತಾನಾದರೊ "ಕತ್ತಲೆಯಲ್ಲಿ ಬೆಳಗಕಾಂಬ ಸಂದೇಹಿ" ಅದನ್ನರುವವರಾರು ? ಆಕೆಯ ಮನದ ನೋವು ಹೊನಲಾಗಿ ಹರಿದಿದೆ. ಎಂಥ ಗುರುಶಿಷ್ಯ ಸಾಮರಸ್ಯ ಎಂದುಕೊಳ್ಳುವಷ್ಟರಲ್ಲಿ ಇನ್ನೊಂದೆಡೆಯಿಂದ ತಮ್ಮನ ವಿಯೋಗಕ್ಕೆ ಅಳುತ್ತಿರುವ ಸೋದರಿಯ ನೋವಿನ ನುಡಿ ಮನದ ತುಡಿತ ಕೇಳಿ

ಅಯ್ಯಾ ನಾನಥವೆಯಯ್ಯಾ
ಎನ್ನ ಕೈಯ್ಯ ಕೋಲಕೊಂಬರೆ ಅಯ್ಯಾ
ಎಳಗರುವನೆಳಗಂತಿಯನೆಳೆದೊಯ್ವರೆ
ಅಯ್ಯ, ಅಯ್ಯಾ ಎನಲೊಯ್ವರೆ-ಇದಾರ ನುಡಿ

ಬಸವಣ್ಣನೊಲುಮೆಯ ಅಕ್ಕ ಅಕ್ಕನಾಗಮ್ಮನದು. ಬಸವಣ್ಣ ಕೇವಲ ತಮ್ಮನಾಗಿರದೆ ಅವಳ ಜೀವನಕ್ಕೆ ಒಂದು ಅರ್ಥ ತುಂಬಿದ್ದ. ಅವಳಂತು ಮಗು ಬಸವಣ್ಣನನ್ನು ಎತ್ತಿ ಮುದ್ದಾಡಿದ್ದವಳು. ಅವನ ನೆಳಲಾಗಿ ಬಾಳಿದವಳು. ಅಣ್ಣನೊಡನೆ ಕಪ್ಪಡಿಗೆ ಕಲ್ಯಾಣಕ್ಕೆ ಬಂದು ಮಹಾಮನೆಯ ಹಣತೆಯಾಗಿ ಬೆಳಗಿದವಳು. ಕಲ್ಯಾಣದ ಹಣತೆ ನುಚ್ಚುನೂರಾದುದ್ದನ್ನು ಕಂಡು ತತ್ತರಿಸಿದಳು ಆತನಾದರೊ, ಈಕೆಯ

"ಭವದ ಬಳ್ಳಿಯ ಬೇರಹರಿಸಿದ್ದ
ಮನದ ಕಷ್ಟವ ನೀಗಿಸಿದ್ದ.

ಅಷ್ಟೆ ಅಲ್ಲ ಈಕೆಯ ಕುಲಸೂತಕ ಭವಸೂತಕ ತನುಸೂತಕ ಮನಸೂತಕ ಕಳೆದು ತನ್ನಲ್ಲಿ ಇಂಬಿಟ್ಟುಕೊಂಡಿದ್ದ. ಆದರೆ ಆತ ಶಶಿಧರನು ಅಟ್ಟಿದ ಮಣಿಹ ಪೂರೈಸಿತೆಂದು ಲಿಂಗೈಕ್ಯನಾಗಲು ಆಕೆಯ ನೋವು ಹೇಳಲಸದಳ ನಿಮ್ಮಿಂದೆ ಭಕ್ತಿ ಹೋಯಿತು. 'ಮರ್ತ್ಯಲೋಕದ ಮಹಾಮನೆ ಶೂನ್ಯ ವಾಯಿತಂತೆ ಆಕೆಯ ಮನದ ನೋವು. "ಎನ್ನನೊಯ್ಯದೆ ಹೋದನಲ್ಲ ಬಸವಣ್ಣ" ಎಂಬುದು ಅಂತೂ ಬಸವಣ್ಣನ

ಬಗ್ಗೆ ಅಕ್ಕನಾಗಮ್ಮನಿಗೆ ಅತೀವ ಮಮತೆ ಆತನಗಲಿಯಿಂದ ಇನ್ನೇವೆನಿನ್ನೇವೆನಯ್ಯ ಎಂದು ತತ್ತರಿಸುತ್ತಾಳೆ ಶರಣರಕ್ಷಿಯಾಗಿ. ವಚನಸಾಹಿತ್ಯ ರಕ್ಷಿಸಿ, ವೀರತನದಿಂದ ಹೋರಾಡಿದ ಅಕೆಯ ಕಣ್ಣ ಮುಂದೆ ಮಗ ಚೆನ್ನಬಸವಣ್ಣ ನಐಕ್ಯ,ಈ ಸನ್ನಿವೇಶವನ್ನು ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ಅಳುವಿನಿಂದ ಉಳಿವಿಗೆ ಕಾದಂಬರಿಓದಬೇಕು. ಆಕೆಯ ಮನದ ತಳಮಳವನ್ನು ಹೆಜ್ಜೆಹೆಜ್ಜೆಗೂ ಸುಂದರವಾಗಿ ಪಡಿಮೂಡಿಸಿದ್ದಾರೆ, ಅಲ್ಲಿ ಕ್ಷಣ ದೃತಿಗೆಟ್ಟರೂ ದಿಟ್ಟತನದಿಂದ ನಿಂತ ಅಕ್ಕನ ನಿಲುವನ್ನು ನೋಡಿದಾಗ ಆಚ್ಚರಿಯಾಗುತ್ತದೆ.

ಇಂದೆಲ್ಲಿ ಕಾಣಬೇಕು ಇಂಥ ಸೋದರ ವಾತ್ಸಲ್ಯವನ್ನು. ಸ್ವಾರ್ಥ ತುಂಬಿದ ಈ ಪ್ರಪಂಚದ ಪ್ರೀತಿ ವಾತ್ಸಲ್ಯ ಮಮತೆ ಸೆಲೆ ಬತ್ತಿಹೋಗುತ್ತಿದೆ.

ಒಟ್ಟನಲ್ಲಿ ಹೇಳುವುದಾದರೆ ಮರಣವೇ ಮಹಾನವಮಿ ಎಂದರಿತು ಆಚರಿಸಿದರೂ ಅವರ ಮನದಾಳದ ಮೂಲೆಯಲ್ಲಿ ಹುದಗಿದ್ದ ಅಂತರಂಗದ ತುಡಿತ ಮಿಡಿತಗಳ ಎಳೆಯನ್ನು ನಾವು ಮರೆಯುವಂತಿಲ್ಲ.

❋❋❋❋ ❋❋❋❋❋❋❋❋❋❋❋❋❋❋❋❋❋❋❋❋

## ವಚನ

ಕಪಿ ಕಳ್ಳ ಕುಡಿದು, ಕಡಲ ದಾಂಟುವೆನೆಂದು ಲಂಘಿಸಿ ನಡುನೀರಲ್ಲಿ ಬಿದ್ದು, ಮೀನ ಮೊಸಳೆಗಾಹಾರವಾದಂತಾಯಿತ್ತಯ್ಯಾ ಎನ್ನ ಬಾಳುವೆ ಆದಿಯಲ್ಲಿ ನಿನ್ನ ಗರ್ಭಾಬ್ಧಿಯಲ್ಲಿ ಜನಿಸಿ, ನಿನ್ನ ನೆನಹಿಲ್ಲದೆ ಇಷ್ಟಲಿಂಗವನರಿಯದ ಕಷ್ಟಜೀವಿಗಳ, ಪ್ರಾಣಲಿಂಗವನರಿಯದ ಪರಮ ಪಾತಕರ, ಭಾವ ಲಿಂಗವನರಿಯದ ಭವಕ್ಕೊಳಗಾದ ಹುಲುಮಾನವರ ತಂದೆ ತಾಯಿ ಬಂಧು ಬಳಗವೆಂದು ಭಾವಿಸಿದ ಬಲುಪಾತಕವೆನ್ನನಂಡಲೆದು, ಅವುರ್ದಪಿ ಅಗಲದ ಕಾರಣ ನಿಂದ ಠಾವಿಂಗೆ ನೀರ್ದಳಿವರಯ್ಯ ಕುಳಿತಠಾವಿಂಗೆ ಹೋಮವನಿಕ್ಕುವರಯ್ಯಾ. ನಾನುಬಂದ ಬಟ್ಟೆಯೊಳಗೆ ಒರ್ವರು ಬಾರರಯ್ಯಾ. ಕಾಲನಾಳಿಂಗೆ ಕಾಲ್ದುಳಿಯಾದೆನಯ್ಯ. ಶುನಕ ಸೂಕರಾದಿಗಳ ಬಸಿರಲ್ಲಿ ಬರುವಂತೆ ಮಾಡಿತ್ತಯ್ಯ ಎನ್ನ ಮಾಯೆ. ಒರ್ವರಿಗೆ ಹುಟ್ಟಿ ಮತ್ತೊರ್ವರ ಅಪ್ಪ ಎಂಬ ನಾಣ್ಣುಡಿಯ ದೃಷ್ಟ ಎನಗಾಯಿತ್ತಯ್ಯ ಗುರುವೆ. ಈ ದೋಷಮಂ ಕರುಣದಿಂದ ಕಳೆದು, ಶುದ್ಧನ ಮಾಡಿ, ನಿನ್ನನೆ ಜನನಿ ಜನಕನೆಂದು ನಿನ್ನ ಭಕ್ತರನೆಬಂಧು ಬಳಗವೆಂಬ ಸುಜ್ಞಾನಮಂ ಕೊಟ್ಟು, ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿನಿನ್ನತ್ತಲೆ ಸಮ್ಮುಖಮಾಡಿ, ಅಕ್ಕರಿಂದೆ ರಕ್ಷಿಪುದಯ್ಯಾ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ.



## ವಿಶ್ವದ ಅನಂತ ಚೇತನ ಸದ್ಗುರು ಶ್ರೀ ಸಿದ್ಧಾರೂಢರು

❁ ಪ್ರಾ|| ಸಿ. ಲಿಂಗರಾಜು ಮುಳ್ಳಳ್ಳಿ, ಕೆ.ಎಲ್ ಇ. ಸೊಸೈಟ ಶಿಕ್ಷಣ ಮಹಾವಿದ್ಯಾಲಯ,
ವಿದ್ಯಾನಗರ, ಹುಬ್ಬಳ್ಳಿ–21

---

"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂಬಂತೆ ಸಕಲ ಸೃಷ್ಟಿ ಕರ್ತನಾದ ಪರಮಾತ್ಮನು ಭೂಮಿಯ ಮೇಲೆ ಆಗಾಗ ಅವತರಿಸಿ. ಭಕ್ತರ ಕಷ್ಟಗಳನ್ನು ನಿವಾರಿಸಿ ನೆಮ್ಮದಿಯ ಬದುಕಿಗೆ ಮಾರ್ಗ ತೋರಿದ ಮತ್ತೊಂದು ಮಹಾನ್ ಅವತಾರಿ ಚೇತನವೇ ಹುಬ್ಬಳ್ಳಿಯ ಶ್ರೀ ಸದ್ಗುರು ಸಿದ್ಧಾರೂಢ ಮಹಾಸ್ವಾಮಿಗಳವರು.

ಭರತ ಖಂಡದಾದ್ಯಂತ ದುಷ್ಟ-ಶಿಷ್ಟರೆನ್ನದೇ ಸಕಲರಿಗೂ ತಮ್ಮ ಅಮೋಘವಾದ ಅಮೃತವಾಣಿಯಿಂದ ತಮ್ಮ ಅನುಭವವನ್ನು ಜನತೆಗೆ ಬೋಧಿಸಿ ಅವರನ್ನು ಕೃತಾರ್ಥರನ್ನಾಗಿ ಮಾಡಿದ ಮಹಾಮಾತಿಶಯದಿಂದ ಕೂಡಿ ಬೆಳಗುತ್ತಿರುವ ಶ್ರೀ ಸದ್ಗುರು ಸಿದ್ಧಾರೂಡರ ಜೀವನವೇ ಒಂದು ಪವಾಡ. ಸಕಲಧರ್ಮಗಳ ಏಕತೆಯ ಸಂಕೇತವಾಗಿದ್ದ ಅವರ ಮಾನವೀಯ ಮಹೋನ್ನತಿಯ ನಿಲುವು ದಿವ್ಯ ಪ್ರಭೆಯತ್ತ ನಮ್ಮೆಲ್ಲರನ್ನು ಕೊಂಡೊಯ್ಯುತ್ತಿದೆ. ಶ್ರೀ ಸದ್ಗುರು ಸಿದ್ಧಾರೂಢರ ಪಾದಸ್ಪರ್ಶದಿಂದ ನಾಡು ಪುನೀತವಾಗಿದೆ. ನಾವೆಲ್ಲರೂ ಪುಣ್ಯವಂತರಾಗಿದ್ದೇವೆ.

ಶ್ರೀ ಸದ್ಗುರು ಸಿದ್ಧಾರೂಢರು ಕನ್ನಡನಾಡಿನ ಬೀದರ ಜಿಲ್ಲೆಯಬಾಲ್ಕೀ ತಾಲ್ಲೂಕಿನ ಚಳಕಾಪುರ ಎಂಬ ಪುಣ್ಯ ಗ್ರಾಮದಲ್ಲಿ ಪುಣ್ಯಶಾಲಿಗಳಾದ, ಗುರುಭಕ್ತಿಗೆ ಹೆಸರಾದ ಗುರುಶಾಂತಪ್ಪ ಮತ್ತು ದೇವಮಲ್ಲಮ್ಮರ ಪುಣ್ಯೋದರದಲ್ಲಿ ಮೂರನೆಯವರಾಗಿ ಅವತರಿಸಿದರು. ಕ್ರಿ.ಶ. 1837ರ ಚೈತ್ರ ಶುದ್ದ ನವಮಿ ದಿವಸ ಶ್ರೀ ಸಿದ್ದನ ಅವತಾರವಾಯಿತು. ನಾಡು ಕೂಡ ಪುನೀತವಾಯಿತು. ಚಿಕ್ಕವರಿರುವಾಗಲೇ ಶಾಸ್ತ್ರ ವೇದಾಂತ ಪಠಣ ಮಾಡಿದ ಪೂಜ್ಯರು ಲೋಕ ಕಲ್ಯಾಣಾರ್ಥವಾಗಿ ಧರೆಗಿಳಿದು ಬಂದ ಅವತಾರೀ ಪುರುಷರೆನಿಸಿಕೊಂಡರು. ಪುಟ್ಟ ಪರಮಾತ್ಮನಾಗಿಯೇ ಚಿಕ್ಕವರಿರುವಾಗಲೇ ಪವಾಡಗಳನ್ನು ಮಾಡಿದ ಅವರ ಲೀಲೆಗಳು ಮನಮೋಹಕ.

ಬಾಲಕ ಸಿದ್ಧರು ಸಂಕ್ರಾಂತಿಯ ಹಬ್ಬ ಬಂದಾಗ ಗೆಳೆಯರನ್ನುದ್ದೇಶಿಸಿ "ಎಳ್ಳುಬೆಲ್ಲ ನಿಮಗೆಲ್ಲ ತಿನ್ನುವುದಕ್ಕೆ ಕೊಡುತ್ತೇನೆ" ಎಂದು ಮನೆಗೆ ಕರೆದುಕೊಂಡು ಹೋಗಿ ಚಿಕ್ಕಗಡಿಗೆಯಿಂದ ಬೃಹತ್ ಎಳ್ಳಿನ ರಾಶಿಯನ್ನೇ ಕೆಡವಿ ಮುಂದಿನ ಜಗತ್ ಕಲ್ಯಾಣಕ್ಕಾಗಿ ಅಣಿಯಾದರು. ಐದು ವರುಷದವನಿದ್ದಾಗ ತಾವೇಶಾಪಕೊಟ್ಟ ಎಮ್ಮೆಗೆ ಪುನರ್ ಜನ್ಮನೀಡಿ. "ಓಂ ನಮಃ ಶಿವಾಯ" ಮಂತ್ರದ ಮಹತ್ವವನ್ನು ಅರುಹಿದರು.

ಮತ್ತೊಂದು ಸಂದರ್ಭದಲ್ಲಿ ಈಜಲು ಬಾರದ ಭಯಭೀತ ಗೆಳೆಯನನ್ನು ನೀರೊಳಕ್ಕೆ ಈಜಲು ಕರೆದೊಯ್ದರು. ಆತ ದಡಕ್ಕೆ ಬರದೇ ಇದ್ದಾಗ ಊರಿನ ಜನತೆ ಮತ್ತು ಗೆಳೆಯನ ತಾಯಿಯನ್ನುದ್ದೇಶಿಸಿ "ಗಾಬರಿಯಾಗಬೇಡ ತಾಯಿ, ನಿನ್ನ ಮಗನು ಆನಂದದಿಂದ ಜೀವಂತನಾಗಿರುವನು ನೀನು ಈಗಲೇ ಆತನ ಹೆಸರಿನಿಂದ ಕರೆದರೆ. ಆತನು ಎದ್ದು ಬರುವನು" ಎಂದಾಗ ತಾಯಿ "ದೇವದತ್ತಾ ಬಾ" ಎಂದು ಕೂಗಿದುದೇ ತಡ ಈಜುತ್ತಾ ದಂಡೆಗೆ ಬಂದು ತಾಯಿಯನ್ನು ಕೂಡಿಕೊಂಡನು ಹೀಗೆ ಚಿಕ್ಕವರಿರುವಾಗಲೇ ಅದ್ಭುತ ಪವಾಡಗಳನ್ನು ತೋರಿಸಿದರು.

ತಾಯಿಯ ಅಪ್ಪಣೆಯಂತೆ ಮನಸ್ಸಿಲ್ಲದೇ ಶಾಲೆಗೆ ಹೋದ ಪ್ರಸಂಗವೊಂದರಲ್ಲಿ "ಓಂ" ಎಂಬ ಅಕ್ಷರ ತೀಡು ಎಂದಾಗ ಪೂಜ್ಯರು ಗುರುಗಳನ್ನುದ್ದೇಶಿಸಿ ಈ "ಓಂ" ಕಾರದ ಅರ್ಥವನ್ನು ತಿಳಿಸಿದರೆ ಆಮೇಲೆ ಅದನ್ನು ತೀಡುವೆ ಎಂದಾಗ ಗುರುಗಳಿಗೆ ಅರ್ಥಹೇಳುವುದಾಗಲಿಲ್ಲ. ಕೊನೆಗೆ ಸಿದ್ಧಾ ಈ "ಓಂ" ಕಾರದ ಅರ್ಥವನ್ನು ನೀನೆ ಬಿಡಿಸಿ ಹೇಳು ಎಂದಾಗ

ಗುರುಗಳೇ ಓಂಕಾರವು ಪರಬ್ರಹ್ಮವಾಚಕ ಪದವು ; ಸಗುಣ ಬಹ್ಮನಲ್ಲಿ ಪಂಚಗುಣಗಳು ಕೂಡಿರುವುದರಿಂದ ಆತನನ್ನು ಪಂಚಮುಖ ಪರಬ್ರಹ್ಮನೆಂದು ಕರೆಯುತ್ತಾರೆ. ಸಮಸ್ತ ಭ್ರಾಂತಿ ಪರಿಹಾರಕ್ಕೆ ಮಾರ್ಗದರ್ಶನವಾಗಿದೆ ಎಂದರಲ್ಲದೇ,

"ಸರ್ವತೋರ್ಕೆಯು ಪ್ರಣವಮಯವಿದು
ಸರ್ವವುಂ ಓಂಕಾರ ಮಯವ್ವೈ
ಸರ್ವಜಗತಾಂ ಬ್ರಹ್ಮನೆಂದೇ ಶೃತಿಯು ಘೋಷಿಸುವುದು"

ಎಂದು ಸಿದ್ಧರು ನುಡಿದರು "ಆಗಮ ಶೃತಿವೆತ್ತ ಸದ್ಗುರುವಾಗೆಸೆವ ಶಿವಯೋಗಿಗಲ್ಲದೆ ಅನ್ಯರಿಗಾಗದು" ಎಂದು ಹೇಳಿ ಸಿದ್ಧರು ಮನೆಕಡೆ ನಡೆದರು. ಪೂಜ್ಯರು ಶಾಲೆಗೆ ಹೋದದ್ದು ಅದೇ ಮೊದಲು; ಅದೇ ಕೊನೆ. ಚಿಕ್ಕವಯಸ್ಸಿನಲ್ಲಿಯೇ ಸಿದ್ಧರು ಸಿದ್ಧಿಗಳ ಆಗರವಾಗಿದ್ದರು. ಆ ಸಿದ್ಧಿಗೆ ಈ ನಾಡೇ ಕಾರ್ಯಕ್ಷೇತ್ರವಾಯಿತು. ಏಳನೇಯ ವಯಸ್ಸಿನಲ್ಲಿ ಸರ್ವರ ಕಲ್ಯಾಣಕ್ಕಾಗಿ ಮನೆಯನ್ನು ತ್ಯಜಿಸುವ ಪ್ರಸಂಗವೊಂದನ್ನು ತಾವೇ ಸೃಷ್ಟಿಸಿಕೊಂಡು ಬೇಕಂತಲೇ ವಿಷ ಸರ್ಪದಿಂದ ಕಚ್ಚಿಸಿಕೊಂಡು ಶಿವಭಕ್ತ ಜಂಗಮ ಶಿವಯ್ಯನವರ ಅನುಕಂಪದಿಂದ ಪಾರಾಗಿ ಮನೆ ತ್ಯಜಿಸಿ ಹೊರಟಿರಲು ತಂದೆ ತಾಯಿಗಳ ದುಃಖಕ್ಕೆ ಆ ಶಿವಯ್ಯನವರು "ಇವನು ಲೋಕಕ್ಕೆ ಗುರುವೆನಿಸುವ ಮಹಿಮಾವಂತನು. ನೆಪಕ್ಕೆ ನಿಮ್ಮ ಉದರದಲ್ಲಿ ಉದಯಿಸಿರುವನು" ಎಂದು ಹೇಳಿದಾಗ, ಎಲ್ಲವೂ ಅರ್ಥವಾಯಿತು. ಸಂಸಾರಿಯಾಗಿ ಮನೆಯಲ್ಲಿರದಿದ್ದರೂ 'ಸಂನ್ಯಾಸಿಯಾಗಿದರೂ ಮಗನು ಬದುಕಿರಲಿ' ಎಂದು ಹರಿಸಿ ಬೀಳ್ಕೊಟ್ಟರು.



ಲೋಕೋದ್ಧಾರಕ್ಕಾಗಿ ಅಣಿಯಾದ ಸಿದ್ಧರು ಸ್ವಸುಖವನ್ನು ಸುಟ್ಟರು. ಸರ್ವರ ಸುಖವನ್ನೇ ಅಪೇಕ್ಷಿಸಿ ಮುನ್ನಡೆದರು. ಗುರುದರ್ಶನಕ್ಕೆ ಹಂಬಲಿಸುತ್ತಾ ಹೈದರಾಬಾದ್ ಗೋವಳಕೊಂಡಕ್ಕೆ ಸಂಚರಿಸಿ, ಕೊನೆಗೆ ದಕ್ಷಿಣದ ಶ್ರೀಶೈಲಕ್ಕೆ ಬಂದು ಜಗದ್ಗುರಗಳ ದರ್ಶನಾಶೀರ್ವಾದ ಪಡೆದಾಗ, ಜಗದ್ಗುರುಗಳು ಸಿದ್ಧಾ ನಿನ್ನ ಇಷ್ಟಾರ್ಥಗಳು ಈಡೇರಲಿ, ನಿನ್ನಿಂದ ಲೋಕಕಲ್ಯಾಣ ಕಾರ್ಯಗಳಾಗಲಿ ಭವದಲ್ಲಿ ಬಿದ್ದು ಒದ್ದಾಡುವ ಜನರಿಗೆ ಉದ್ಧಾರದ ಹಾದಿ ತೋರು. ನಿನಗೆ ಸರ್ವಜ್ಞತ್ವವು ಪ್ರಾಪ್ತವಾಗಲಿ ಎಂದು ಹರಸಿದರು. ತದನಂತರ ರಾಯ್ಚುಟಿ, ನವನಂದಿ ಮೊದಲಾದ ಕಡೆ ಸುತ್ತಾಡಿ ಅಮರಗುಂಡದಲ್ಲಿ ಗಜದಂಡ ಸ್ವಾಮಿಗಳನ್ನು ಪ್ರತ್ಯಕ್ಷ ಕಂಡಾಗ ಸಿದ್ಧರನ್ನು ಸ್ವಾಮಿಗಳು ಮನದಲ್ಲಿ ‹‹ಈತ ನರನಲ್ಲ ಹರನೇ ವೇಷ ತೊಟ್ಟು ಬಂದಿದ್ದಾನೆ ಎಂದು ಭಾವಿಸಿದರು- ಹೀಗೆ ಸಿದ್ಧರನ್ನು ಮಠದಲ್ಲಿಟ್ಟುಕೊಂಡು ಪ್ರಪಂಚಕ್ಕೆ ನಿಜಸತ್ಯವನ್ನು ಪ್ರಕಟಿಸಲು ನಿರ್ಧರಿಸಿದರು. ಅಂದಿನಿಂದ ಎಲ್ಲ ಕಾರ್ಯಗಳನ್ನು ಮಠದಲ್ಲಿದ್ದುಕೊಂಡು ನಿಷ್ಠೆಯಿಂದ ಮಾಡಹತ್ತಿದರು. ಆಗಾಗ ಗುರುಗಳೊಂದಿಗೆ ತರ್ಕವಿಚಾರದಲ್ಲಿ ತೊಡಗುತ್ತಿದ್ದ ಸಿದ್ದರ ಅವಧಾನ ಮೊದಲಿನಿಂದಲೂ ಮೂಲಬ್ರಹ್ಮನಲ್ಲಿಯೇ ಆರೂಢವಾಗಿದ್ದುದರಿಂದ ಗುರುಗಳು ಅವರಿಗೆ ‹‹ಸಿದ್ಧಾರೂಢ ಭಾರತಿ" ಎಂಬ ಹೆಸರಿನಿಂದ ಕರೆದು ಪ್ರಾಪಂಚಿಕರಿಗೆ ಶಿವಮಾರ್ಗವನ್ನು ತೋರಿಸಿ ಕೊಟ್ಟು ಉದ್ಧರಿಸು. ಪ್ರಾರಬ್ಧವಾದ ಸುಖದುಃಖಗಳನ್ನು ಸಮಾನದಿಂದ ಸ್ವೀಕರಿಸು, ಜಗದ ಕಣ್ಣಾಗು, ಮಹಾಯೋಗಿಯಾಗು ಎಂದು ಹರಸಿದಾದ ಮೇಲೆ ದೇಶಸಂಚಾರಕ್ಕೆ ಸಿದ್ಧರು ಅಣಿಯಾದರು. ದೇಶಸಂಚಾರದಲ್ಲಿದ್ದಾಗ ಗೋಕರ್ಣದಲ್ಲಿ ಪೂಜ್ಯ ಜಡೆಪ್ಪನವರ ದರ್ಶನವಾಯಿತು- ಅವರು ಗೋಕಾಕದ ಬಳಿಯಿರುವ ಸುಣದೂಳಿ ಗ್ರಾಮದ ಜಡೆಪ್ಪನ ಮಠದ ಗುರುಗಳು, ಉಗ್ರಮೂರ್ತಿ ತಪೋನಿಷ್ಠರು, ಅಪ್ಪಟ ಬ್ರಹ್ಮಚಾರಿಗಳಾಗಿದ್ದು ಒಬ್ಬರನ್ನೊಬ್ಬರು ಒಳಗೇ ಕಂಡರು ಹೊರಗೆ ಕೂಡಿದರು. ಮುಂದೆ ದ್ವಾರಕ, ಪಂಜಾಬ, ಬದರೀನಾಥ ಮುಂತಾದೆಡೆಗೆ ನಡೆದಾಡುತ್ತ ಗರಗದ ಪೂಜ್ಯ ಮಡಿವಾಳಪ್ಪನವರತ್ತ ಬಂದರು. ಗರಗದ ಪೂಜ್ಯರು ಪೂರ್ವದಲ್ಲಿ ಕಿತ್ತೂರು ಕಲ್ಮಠದ ಪಟ್ಟಕ್ಕೆ ಒಡೆಯರಾಗಿದ್ದು ಕೆಲವು ಆತಂಕಗಳಿಂದ ಅಲ್ಲಿಂದ ಹೊರಬಿದ್ದು ಅವರು ಮುರುಗೋಡದ ಚಿದಂಬರ ದೀಕ್ಷಿತರ ಪಟ್ಟದ ಶಿಷ್ಯರಾಗಿ ಪವಾಡಪುರುಷರೆನಿಸಿ ಜಗದ ಹಿತಕ್ಕೆ ಕಂಕಣಬದ್ಧರಾಗಿ ನಿಂತವರು. ಈ ಎಲ್ಲಾ ಸಂಗತಿ ಅರಿತ ಸಿದ್ಧರು ಗರಗ ಗ್ರಾಮದ ಸನಿಹ ಬಂದರು. ಮಠದಲ್ಲಿದ್ದುಕೊಂಡೇ ತ್ರಿಕಾಲ ಜ್ಞಾನಿ ಗೂಗೆ ಮಡಿವಾಳಪ್ಪನವರು, ಸಿದ್ಧರು ತಮ್ಮತ್ತ ಬರುವುದನ್ನು ಗುರುತಿಸಿ, ಶಿಷ್ಯನಾದ ಘಂಟೆಪ್ಪನನ್ನು "ಘಂಟ್ಯಾ" ಎಂದು ಕೂಗುತ್ತಾ, ಆಕೈಪೆ ತಾರೋ ಎಂದು ಕೇಳಿ ತೊಟ್ಟುಕೊಂಡು ಕುಳಿತರು. ಕ್ರಿ. ಶ. 1876-77ರ ಸುಮಾರಿಗೆ ಗರಗದ ಮಡಿವಾಳಪ್ಪನವರನ್ನು ಕಂಡರು. ಜಗದ ಚಿಂತೆ

ಯನ್ನು ದೂರವಮಾಡಲು ಕೆಲದಿನ ಅಲ್ಲಿ ತಂಗಿದ್ದರು. ನಂತರ ಹೂಬಳ್ಳಿಯಂತಹ ಹುಬ್ಬಳ್ಳಿಗೆ ತಮ್ಮ 40 ನೇ ವಯಸ್ಸಿನಲ್ಲಿ ಹೊರಟು ನಿಂತರು. ಗುರುಸ್ವರೂಪರಾದ ಮಡಿವಾಳೇಶ್ವರರ ಸಲಹೆಯಂತೆ ಹೂಬಳ್ಳಿಗೆ ಬಂದದ್ದು ನಾಡಿನ ನೆಲದ ಸಮಗ್ರ ಪುಣ್ಯ ಹುಬ್ಬಳ್ಳಿಗೆ ಇತ್ತೇನೋ ಅನಿಸದೇ ಇರದು. ಏಕೆಂದರೆ ಇಡೀ ದೇಶವನ್ನು ಮುವತ್ತು ವರುಷಗಳಕಾಲ ಸಂಚರಿಸಿದರೂ, ಎಲ್ಲಿಯೂ ಸ್ಥಿರವಾಗಿ ನಿಲ್ಲದ ಸಿದ್ಧರು ಹುಬ್ಬಳ್ಳಿಯಲ್ಲಿ ಸ್ಥಿರವಾಗಿ ನೆಲೆಯೂರಲು ನಿಂತದ್ದು ಸೌಭಾಗ್ಯವೇಸರಿ. ಎರಡು ವರುಷದ ಮೌನ ಮುಗಿದಾಗ ಅವಶ್ಯವೆನಿಸಿದಾಗ ಮಾತನಾಡುತ್ತಿದ್ದರಲ್ಲದೇ ಭಕ್ತರ ಕಷ್ಟಗಳನ್ನು ತಮ್ಮ ದಿವ್ಯ ಶಕ್ತಿಯಿಂದ ನಿವಾರಿಸುತ್ತಿದ್ದರು. ಬಡವ ಭೀಮಪ್ಪನ ಮಡದಿ ಲಕ್ಷ್ಮವ್ವನ ಮಗನಾಗಿ ತಮ್ಮನ್ನೇ ತಾವು ಅರ್ಪಿಸಿಕೊಂಡ ಮಹಾಮಹಿಮರೆನಿಸಿ ಕೊಂಡರು. ಇದನ್ನು ಸಹಿಸದ ಜನ ಕೊಲ್ಲಲು ನಿರ್ಧರಿಸಿ, ಕೊನೆಯಲ್ಲಿ ತಮ್ಮಷ್ಟಕ್ಕೆ ತಾವೇ ಪಶ್ಚಾತಾಪ ಪಟ್ಟರು. ಪಾರ್ವತಿ ಅವತಾರವೆಂದು ಕರೆಯಲ್ಪಡುವ ನವಲಗುಂದದ ಅಜಾತ ನಾಗಲಿಂಗಸ್ವಾಮಿಗಳು ಮಹಿಮಾಶಾಲಿಗಳೂ ಕೂಡ. ಸಿದ್ಧರ ಮಹಿಮೆಯನ್ನು ನಾಡಿಗೆ ತೋರಿಸಿಕೊಟ್ಟರು. ಹಾಗೆಯೇ ಕಬೀರರೂ ಸಿದ್ಧರಪ್ರೀತಿಗೆ ಪಾತ್ರರಾದರು. ಪೂಜ್ಯರ ಇನ್ನೊಬ್ಬ ಪ್ರೀತಿಯ ಆಪ್ತಶಿಷ್ಯ ಗುರುನಾಥಾರೂಢರು.

ಪೂಜ್ಯರು ಮಾಡಿದ ಪವಾಡಗಳ ಸಂಖ್ಯೆ ನಿಲುಕಲಾರದಷ್ಟಿರಲು ಕುಹಕ ಬುದ್ಧಿ ಜನತೆ ಕ್ರಿ.ಶ. 1929ರ ಶ್ರಾವಣಮಾಸದ ದಿನದಂದು ಪೂಜ್ಯರು ಪ್ರಸಾದ ಮುಗಿಸಿ ವಿಶ್ರಾಂತಿ ಪಡೆಯುವವರಿದ್ದರು. ಅಷ್ಟರಲ್ಲಿಯೇ ಓರ್ವ ಹೆಣ್ಣು ಮಗಳು ಕುಹಕಿಗಳು ಕಳಿಸಿದ ಚಿತ್ರಾನ್ನದ ಎಡೆಯನ್ನು ತಂದು ಪೂಜ್ಯರನ್ನು ಕಂಡು, ನನ್ನಪ್ಪ ನಿನಗಾಗಿ ಈ ಅನ್ನವನ್ನು ಮಾಡಿರುವೆನು ತಿನ್ನು ನನ್ನತಂದೆ ಎಂದಾಗ ಒಲ್ಲದಮನಸ್ಸಿನಿಂದ ನಿರಾಕರಿಸಿದರೂ ಪುರಾಣ ಪುಣ್ಯಕತೆಗಳಲ್ಲಿ ದೇವಾನುದೇವತೆಗಳನ್ನು ರಕ್ಷಿಸುವದಕ್ಕೋಸ್ಕರ ಶಿವನು ವಿಷನುಂಗಿ ಯಾವ ರೀತಿಯಾಗಿ ವಿಷಕಂಠ ನೆನಿಸಿದನೋ ಅಂತಹ ಪ್ರಸಂಗ ಕಲಿಯುಗದಲ್ಲಿ ಮತ್ತೊಂದು ಬಾರಿ ನಡೆಯಿತು. ಆದರೆ ಪೂಜ್ಯ ಸಿದ್ಧಾರೂಢರು ಪ್ರಸಾದ ಬೇಡವೆಂದರೂ ಬಿಡದೇ ಒತ್ತಾಯದಿಂದ ಉಣಬಡಿಸಲು ಸಿದ್ಧಳಾದಳು. ಆಗ ಪೂಜ್ಯ ಸಿದ್ಧಾರೂಢರು ನಸುನಗುತ್ತ "ಅಹುದವ್ವಾ ಅಹುದು ಎರಡು ತಿಂಗಳಿನಿಂದಲೂ ನನಗಾಗಿ ವಿಶೇಷ ಪ್ರಸಾದದ ವ್ಯವಸ್ಥೆ ಮಾಡಿರುವುದು ನನಗೆ ಗೊತ್ತು ಎಂದು ನುಡಿದಾಗ, ಅವಳಿಗೆ ಭಯವಾಯಿತು. ಆದರೂ ತೋರಿಕೆಯ



ನಟನೆಯಂತೆ, ಈ ಪ್ರಸಾದವನ್ನು ಸ್ವೀಕರಿಸದೇ ಹೋದರೆ ನಾನು ಈದಿವಸ ಪ್ರಸಾದವನ್ನೇ ಕಚ್ಚುವದಿಲ್ಲ" ಎಂದು ಹಟಹಿಡಿದಳು. ನೋಡು ತಾಯೀ ಮಠಕ್ಕೆ ತಂದುದು ಅದು ಏನೇ ಇದ್ದರೂ ಪ್ರಸಾದ. ಆಗಲಿ ತಾಯಿ ಎಂದೆನ್ನುತ್ತ ತಂದ ಅನ್ನವನ್ನು ಬಾಯಿಯೊಳಗೆ ಹಾಕಿಕೊಂಡರು. ಮರುಕ್ಷಣದಲ್ಲಿಯೇ ವಿಷದ ಚುರುಕು ಪೂಜ್ಯರ ಗಂಟಲಿಗೆ ತಾಕಿತ್ತು. "ತಾಯಿ ಒಂದು ನಿಮಿಷ ತಡೆ ಅಂಜಬೇಡ. ನಿನ್ನ ಪ್ರಸಾದ ಸ್ವೀಕರಿಸಿದ್ದಾಯಿತು. ಇದನ್ನು ಅಲ್ಲಿ ಇಲ್ಲಿ ಚೆಲ್ಲಬೇಡ. ಹುಳು-ಹುಪ್ಪಡಿ ದನುಕರುಗಳು ಪಶು-ಪಕ್ಷಿಗಳಿಗೆ, ಮನುಷ್ಯರಿಗೆ ಹಾಕಬೇಡ. ಈ ಅನ್ನದ ಒಂದೊಂದು ಅಗಳಿಗೂ ಒಬ್ಬೊಬ್ಬ ಪ್ರಾಣಬಿಡುವುದು ಖಂಡಿತ, ಎಂದು ದೀನ ಧ್ವನಿಯಿಂದ ನುಡಿದರು. ಇಂತಹ ಸ್ಥಿತಿಯಲ್ಲಿಯೇ ಭಕ್ತರ ಮಧ್ಯೆ ನಾಲ್ಕು ದಿನಗಳವರೆಗೆ ಉಳಿದರು. ಅಪಾರ ಭಕ್ತರ ಹೊಟ್ಟೆ ಕರುಳಿಗೆ ಬೆಂಕಿಯಿಟ್ಟಾಂತಾಯಿತು. ಮುಂದೆ ಕೆಲವೇ ಗಂಟೆಗಳಲ್ಲಿ ಪೂಜ್ಯ ಸಿದ್ಧಾರೂಢರ ಮೈ ತಣ್ಣಗಾಗುತ್ತಾ ನಡೆದಂತೆ ಇಹಲೋಕದ ಲೋಕ ಕಲ್ಯಾಣದ ಕಾರ್ಯವನ್ನು ಮುಗಿಸಿದ ಗಾಂಭೀರ್ಯದ ಕಳೆ ಪೂಜ್ಯರ ಮುಖದಲ್ಲಿ ಎದ್ದು ಕಾಣುವಂತಿತ್ತು. ಆದರೆ ದೇಹ ಶಿವನಲ್ಲಿ ಲೀನವಾಗಿತ್ತು. ಸಕಲ ಕಾರ್ಯಸಿದ್ಧಿಗಳಿಗೆ ಗುರುವಾದ ಪೂಜ್ಯ ಸದ್ಗುರು ಶ್ರೀ ಸಿದ್ಧಾರೂಢರು ಬಾಹ್ಯವಾಗಿ ನಮ್ಮನ್ನಗಲಿದರೂ ಅವರ ಅನುಗ್ರಹ ಸದಾ ನಮ್ಮೆಲ್ಲರ ಬದುಕಿಗೆ ದಾರಿ ದೀಪವಾಗಿದೆ. ●



## ವಚನ

ಕೊಡುವ ಲಿಂಗವ ಬೇಡಿಕೊಳಲರಿಯದೆ, ಕೊಡಲರಿಯದ ಮಾನವರ ನಾಶೆ ಮಾಡಿ ಕೆಡಬೇಡ ಕೆಡಬೇಡ ಕೇಳಿರಣ್ಣಾ. ಪುರಾತನರು ಗುರುಲಿಂಗ ಜಂಗಮುವನರ್ಚಿಸಿ ದಾಸೋಹವ ಮಾಡಿ, ಕೇವಲ ವಿಶ್ವಾಸದಿಂದೆ ಲಿಂಗವನೆ ಬೇಡಿ, ಲಿಂಗದಲ್ಲಿ ವರವ ಪಡೆದುದಕ್ಕೆ ದೃಷ್ಟವ ನೋಡಿರೇ ಅದು ಎಂತೆಂ ದೊಡೆ, ಲಿಂಗವು ಮಾರ್ಕಂಡೇಯ ನುಳಿಯರಾಜರಿಗೆ ಆಯುಷ್ಯವ ಕೊಟ್ಟ ನೋಡಿರೇ. ಸುರಗಿಯ ಚೌಡಯ್ಯ ಬಸವರಾಜದೇವರ ಹೋದ ಪ್ರಾಣಂಗಳ ಬೇಡಿದೊಡೆ, ಕೊಟ್ಟ ನೋಡಿರೇ. ಇನ್ನು ಲಿಂಗವು ಭಾಷೆಯ ಕೊಟ್ಟುದಕ್ಕೆ ದೃಷ್ಟವ ನೋಡಿರೇ ಚೋಳಂಗೆ ಹೊನ್ನ ಮಳೆಯ ಕರೆಸಿದ ದಾಸಂಗೆ ತವನಿಧಿಯ ಕೊಟ್ಟ ದೇವ ದಾನವ ಮಾನವರಿಗೆಯೂ ಅವರವರು ಬೇಡಿದ ಪದಂಗಳ ಕೊಟ್ಟ ನೋಡಿರೇ. ಇಂತಿವು ಮೊದಲಾದ ಆಯುಷ್ಯ ಭಾಷೆಯು, ಪ್ರಾಣಂಗಳು ಮತ್ತೇನೇನು ಪದಂಗಳಂ ಬೇಡಿದೊಡೆ ಕೊಡುವಂತಹ ಮಹಾದಾನಿಯನೆ ಬೇಡಿಕೊಳ್ಳಿರೆ. ಅನಾಥನಾಥನನು ಅನಾಥಬಂಧುವನು, ಕರುಣಾಕರನನು ವರಮೂರ್ತಿಯನ್ನು ದಾನಗುಣಶೀಲನನು, ಭಕ್ತದೇಹಿಕ ದೇವನನು, ಭಕ್ತದೇಹಿಕ ಚಿಂತಾಮಣಿಯನು, ಭಕ್ತದೇಹಿಕ ಕಾಮಧೇನುವನು, ಭಕ್ತದೇಹಿಕ ಕಲ್ಪವೃಕ್ಷವನು ಬೇಡಿಕೊಳ್ಳಿರೇ ನಮ್ಮ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನು.

## ವಚನ ದೀಪ್ತಿ

ವಿದ್ವಾನ್, ಎಸ್ ಷಡಕ್ಷರಿ, ಸಂಸ್ಕೃತ ಕಾಲೇಜು, ಸಿದ್ಧಗಂಗಾ ಮಠ.

**ಕುಲೀನ** :– ಲೋಕದಲ್ಲಿ ಮಾನವ ಜೀವ ರೂಪುಗೊಳ್ಳಬೇಕಾದರೆ ಮೊದಲುಪಿಂಡಾವಸ್ಥೆ ಸರ್ವ ವಿಧಿತ. ಅವಸ್ಥೆ ಗರ್ಭದಲ್ಲಿ ಸಂಜಾತವಾಗಬೇಕು. ಇದು ರೂಪುಗೊಂಡು ನೆಲೆ ನಿಲ್ಲಬೇಕಾದರೆ ಪ್ರತಿಯೊಂದು ವರ್ಗದ ಜನತೆಯು ಪಿಂಡಕ್ಶೂ ಶುಕ್ಲ ರೇತೋವ್ಯವಹಾರಗಳಲ್ಲಿ ಭಿನ್ನ ಭೇದವಿಲ್ಲ. ಈ ತೆರನಾದ ಪಿಂಡಾವಸ್ತೆಗೆ ಗರ್ಭದಲ್ಲಿ ಒಡಗೂಡಿ ಬರುವ ಆಶೆ, ರೋಷ ಇತ್ಯಾದಿ ನಿಸರ್ಗ ಸ್ವಭಾವಗಳೆಲ್ಲ ಒಂದೇಸಮಾನ. ಅಂದ ಮೇಲೆ ಯಾವ ಆಧಾರದ ಮೇಲೆ ನಾವು ಜನರನ್ನು ಮೇಲು ಕೀಳೆಂದು ತೀರ್ಮಾನಿಸುತ್ತೇವೆ, ಚಾತುರ್ವರ್ಣಗಳ ಭೇದದ ರಹಸ್ಯವಾದರೂ ಏನು? ವಿದ್ಯಾವಂತರೂ ವಿಚಾರವಂತರೂ ಎನಿಸಿಕೊಂಡವರು ಕೂಡ ವರ್ಣಭೇದ ಸಂಪ್ರದಾಯವನ್ನೇ ಚರ್ವಿತ ಚರ್ವಣವಾಗಿ ಮಾಡಿಕೊಂಡಿರುವುದು ಆಶ್ಚರ್ಯ. ಈ ಬಗ್ಗೆ ಶರಣರ ಕಾಲದಲ್ಲಿ ಸಾಕಷ್ಟು ಚರ್ಚೆಯಾಗಿದೆ. ಕಡೆಯದಾಗಿ ಬಸವಣ್ಣನವರು ಈ ಬಗ್ಗೆ ಕುರಿತು ತನ್ನ ವಚನದಲ್ಲಿ ಹೀಗೆ ಅರುಹಿದ್ದಾರೆ.

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ, ಜಲ-ಬಿಂದುವಿನವ್ಯವಹಾರ ಒಂದೇ,
ಆಶೆಯಾಮಿಷಹರುಷ-ರೋಷ ವಿಷಯಾದಿಗಳೆಲ್ಲ ಒಂದೇ
ಏನನೋದಿ, ಏನಕೇಳಿ, ಏನು ಫಲ, ? ಕುಲಜನೆಂಬುದಕ್ಕೆ ಆವುದು ದೃಷ್ಟ?,
ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ,
ವೇದವನೋದಿ ಹಾರವನಾದ, ಕರ್ಣದಲಿ ಜನಿಸಿದವರುಂಟೇ ಜಗದೊಳಗೆ,
ಇದು ಕಾರಣ ಕೂಡಲ ಸಂಗಮದೇವ, ಲಿಂಗಸ್ಥಲವನರಿದವನೇ ಕುಲಜನು.

ಕಾಯಕ ವೃತ್ತಿಯಲ್ಲಿ ಒಬ್ಬನು ಕಬ್ಬಿಣವನ್ನ ಕಾಸಿ ಬಡಿದು ಕಮ್ಮಾರನೆನಿಸಿ ಕೊಂಡರೆ ಮತ್ತೊಬ್ಬ ಬಟ್ಟೆಯನ್ನು ಒಗೆದು ಮಡಿವಾಳನೆನಿಸಿ ಕೊಂಡಿದ್ದಾನೆ ಹಾಸನ್ನು ಹಾಕಿ ವೃತ್ತಿ ಕೈಗೊಂಡವನು ನೆಯ್ಗೆಯವನಾದರೆ, ವೇದವನ್ನು ಓದುವ ಕೆಲಸವನ್ನು ಮಾಡಿದವನು ಹಾರುವನೆನಿಸಿ ಕೊಂಡನಷ್ಟೆ. ಈ ರೀತಿ ಸಮಾಜವ್ಯವಸ್ಥೆಗೆ ಅನೇಕ ವಿಧವಾದ ಅನೇಕರ ಕಾಯ ಕಲ್ಪನೆಗಳು ಸಮಾನಾವಶ್ಯಕವಿರುವಾಗ, ಹಿಡಿದ ವೃತ್ತಿಗೆ ಜಾತಿಯನ್ನು ತೊಡಗಿಸಿ ಅವುಗಳಲ್ಲಿ ಕೆಲವು ವೃತ್ತಿಯನ್ನು ಮೇಲೆಂದು ಕೆಲವನ್ನು ಕೀಳೆಂದು ಪರಿಗಣಿಸುವುದು ಹೀನಾಯವಲ್ಲವೆ ? ಯಾವ ವೃತ್ತಿಯವನು ಕಿವಿಯಲ್ಲಿ ಹುಟ್ಟಿದವನಲ್ಲ. ಪ್ರತಿಯೊಬ್ಬರೂ ಯೋನಿಜರು. ಆತ್ಮ-ಜೀವಸೇರಿ ಆದವರು ರಕ್ತ ಮಾಂಸಗಳು ಎಲ್ಲರಿಗೂ ಸಮಾನವುಂಟು. ಅಂದಮೇಲೆ ಚಾತುರ್ವಣ್ಯದಿಂದ ಐಕಮತ್ಯ ಬೆಳೆಯಲು ಹೇಗೆ ಸಾಧ್ಯ? ಇದರಿಂದ ಪ್ರಯೋಜನವಾದರೂ ಯಾರಿಗೆ ?ಕುಲೀನ ಎನ್ನುವವರು ಇದ್ದಾರೆ ಎನ್ನುವುದಾದರೆ ಪರಮಾತ್ಮನಲ್ಲಿ ಪ್ರಜ್ಞೆಯುಳ್ಳವರಾಗಿ ಶ್ರದ್ಧಾ–ಭಕ್ತಿಯ ಪಥದಲ್ಲಿ ನಡೆಯುವವರು ಕುಲೀನರು. ಉಳಿದವರೆಲ್ಲರನ್ನು ಕುಲಹೀನರೆನ್ನಬಹುದು.

ಆಧಾರ :- ಬಸವಣ್ಣನವರ ವಚನಗಳು

## ಭಾರತದ ಸ್ವಾತಂತ್ರ್ಯ ಸುವರ್ಣ ಮಹೋತ್ಸವ

### ಸತ್ಯ, ಅಹಿಂಸೆ, ಶಾಂತಿ, ಸಹನೆ, ಸಹಬಾಳ್ವೆಗಳಿಗೆ ದೃಢಸಂಕಲ್ಪ

ವಿಶ್ವ ಇತಿಹಾಸದಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟ ಒಂದು ಅತ್ಯಪೂರ್ವ ಆಧ್ಯಾಯ. ಸ್ವಾತಂತ್ರ್ಯ ಗಳಿಕೆಯಲ್ಲಿ ಅದು ಅನುಸರಿಸಿದ ಸಂಯಮ ಮಾರ್ಗ ಜಗತ್ತಿಗೇ ಅನುಕರಣೀಯ. ಅದಕ್ಕಾಗಿಯೆ ಇತಿಹಾಸದಲ್ಲಿ ಅದಕ್ಕೆಅಗ್ರಪಟ್ಟ.

ಟಿಪ್ಪುಸುಲ್ತಾನ್, ಕಿತ್ತೂರು ಚೆನ್ನಮ್ಮ, ಝಾನ್ಸಿರಾಣಿ, ಲಕ್ಷ್ಮಿಬಾಯಿ, ತಾತ್ಯಾಟೋಪಿ, ನಾನಾ ಸಾಹೇಬರಂತಹ ಸ್ವಾಭಿಮಾನಿ, ಸಾಹಸಿ ರಾಜಮನೆತನಗಳು ಸ್ವಾತಂತ್ರ್ಯಕ್ಕೆ ಧಕ್ಕೆಯೊದಗಿದಾಗ ವೀರಾವೇಶದಿಂದ ಹೋರಾಟ ಪರತಂತ್ರಕ್ಕೆ ಬಲಿಯಾಗದೇ ವೀರಮರಣವನ್ನೇ ಕಂಡರು. ಭಗತ್‌ಸಿಂಗ್, ಸುಖದೇವ್, ರಾಜಗುರು, ಚಂದ್ರಶೇಖರ ಅಜಾದ್ ಅವರಂತಹ ಬಿಸಿರಕ್ತದ ಯುವಕರು, ಲಾಲಾ ಲಜಪತರಾಯ, ಬಾಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್ (ಲಾಲ-ಬಾಲ-ಪಾಲ) ಮುಂತಾದ ಉಗ್ರ ಸ್ವರೂಪದ ಸಾಗರದಲ್ಲಿ ಮುಂದೆ 1917ರಲ್ಲಿ ಮೋಹನದಾಸ್‌ಗಾಂಧಿ ಎಂಬ ತಂಗಾಳಿಯ ಚುಕ್ಕಾಣಿ ಹಿಡಿದು ಮುನ್ನಡೆಯಿತು. ಸತ್ಯ, ಅಹಿಂಸೆ ಮತ್ತು ಸಂಯಮಗಳೇ ಈ ಮಹಾನ್ ನಾಯಕನ ಪ್ರಬಲ ಅಸ್ತ್ರಗಳಾದವು.

ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ರೂಪ ಬಂತು. ಗಾಂಧಿ ಎಂಬ ಮಹಾ-ಮಂತ್ರಕ್ಕೆ ದೇಶದ ಸಮಸ್ತ ಜನ ಸಮುದಾಯವೇ ಮುನ್ನುಗ್ಗಿ ಬಂತು. ಹೆಣ್ಣು-ಗಂಡು ಯುವಕರು, ಮುದುಕರು, ಬಡವರು, ಸಿರಿವಂತರು ಎಂಬ ಭೇದಭಾವವಿಲ್ಲದೆ ತಮ್ಮ ಗುಡಿ, ಗುಡಾರಗಳು, ಶಾಲೆ, ಕಾಲೇಜುಗಳು, ಗುಡಿಸಲು, ಮನೆಗಳು, ಮಹಲ್‌ಗಳಿಂದ ಹೊರಬಂದರು. ಅದುವರೆಗೆ ಕತ್ತಿ, ಖಡ್ಗ, ಮದ್ದು, ಗುಂಡುಗಳ ಸಹಾಯದಿಂದ ಗೆದ್ದಿದ್ದ ಬ್ರಿಟಿಷ್ ಸಾಮ್ರಾಜ್ಯದ ಜಂಘಾಬಲವೇ ಉಡುಗಿ ಹೋಯಿತು ಈ ನಿಶ್ಯಸ್ತ್ರಧಾರಿ ತ್ಯಾಗಿ ಜನಸಾಗರದ ಎದುರು. ಜವಾಹರಲಾಲನೆಹರು, ಸರ್ದಾರವಲ್ಲಭಾಯಿಪಟೇಲ, ಸುಭಾಷ್‌ಚಂದ್ರಬೋಸ್, ಮೌಲಾನಾ ಅಬ್ದುಲ್ ಕಲಾಮ ಅಜಾದ್, ಡಾ. ಅಂಬೇಡ್ಕರ ಮುಂತಾದ ನೇತಾರರ ಸಹಯೋಗದಲ್ಲಿ ಗಾಂಧೀಜಿ ಸಾಗಿದ್ದ ಅಹಿಂಸಾತ್ಮಕ ಸ್ವಾತಂತ್ರ್ಯ ಸಮರ, ಅಭಿಪ್ರಾಯ ಭೇದಗಳ ಮಧ್ಯದಲ್ಲೂ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿತು. ಮಹಾತ್ಮ ಗಾಂಧಿಯ ಸಂಮೋಹನಕ್ಕೆ ಒಳಗಾದ ಸೂರ್ಯ ಮುಳುಗದ ಸಾಮ್ರಾಜ್ಯ, ಮನಸೋತು ಸ್ವಾತಂತ್ರ್ಯ ಜ್ಯೋತಿಯನ್ನು ಕೈಗಿತ್ತು ಕಾಲ್ತೆಗೆಯಿತು.

ಈ ಮಹಾನ್ ವಿಜಯ ಗಾಥೆಯಲ್ಲಿ ಕನ್ನಡಿಗರ ಕೊಡುಗೆ ಅನುಪಮ. ಮೈಸೂರು ಹುಲಿ ಟಿಪ್ಪುಸುಲ್ತಾನ್, ರಾಣಿಚೆನ್ನಮ್ಮ, ಸಂಗೊಳ್ಳಿರಾಯಣ್ಣ ಅಬ್ಬಕ್ಕದೇವಿ., ವೀರ ಸಿಂಧೂರ ಲಕ್ಷ್ಮಣರ ವೀರಗಾಥೆಗಳು ಮೈನವಿರೆಗಳಿಸುತ್ತವೆ.

ಅಹಿಂಸಾ ಪಥದಲ್ಲಿ ಸಾಗಿದ್ದ ಸ್ವಾತಂತ್ರ್ಯ ಹೋರಾಟದತ್ತ ಧುಮುಕಲು ತಮ್ಮ ಸಕಲ ಸಂಪತ್ತನ್ನು ತ್ಯಾಗ ಮಾಡಿ ಬಂದ ಮಹನೀಯರು ಶಾಲಾ ಕಾಲೇಜುಗಳನ್ನು ತೊರೆದ ವಿದ್ಯಾರ್ಥಿ ಸಮುದಾಯ ಹಳ್ಳಿ, ಹಳ್ಳಿಗಳಿಂದ ಬಂದ ಜನರೆಲ್ಲರ ಏಕಮಾತ್ರ ಮಂತ್ರ - ಸ್ವತಂತ್ರ ಭಾರತ.

ಆಗಸ್ಟ್ 1942ರಲ್ಲಿ ಕ್ವಿಟ್ ಇಂಡಿಯ ಚುಳುವಳಿಯಲ್ಲಿ ಕರ್ನಾಟಕದ ಸ್ವಾತಂತ್ರ್ಯ ಯೋದರಪಾತ್ರ ಬಹಳ ಹಿರಿದು. ಮೈಲಾರ ಮಹದೇವಪ್ಪ, ಮೆಣಸಿನಕಾಳು ತಿಮ್ಮಣ್ಣ ಗೌಡ, ಕೊಟ್ರೆ ನಂಜಪ್ಪ ಈ ಚಳುವಳಿಯಲ್ಲಿ ವೀರಮರಣವನ್ನಪ್ಪಿದ ಪ್ರಮುಖರು.

ಗಂಗಾಧರರಾವ್ ದೇಶಪಾಂಡೆ, ತಗಡೂರು ರಾಮಚಂದ್ರರಾವ್, ಕೌಜಲಗಿ ಹನುಮಂತರಾವ್, ಕೌಜಲಗಿ ಶ್ರೀನಿವಾಸರಾವ್, ಎಸ್. ಚೆನ್ನಯ್ಯ ಗೋವಿಂದರಾವ್ ಯಾಲಗಿ, ಹನುಮಂತರಾವ್ ದೇಶಪಾಂಡೆ, ಕಾರ್ನಾಡ್ ಸದಾಶಿವರಾವ್, ರಂಗನಾಥ ದಿವಾಕರ ಡಾ. ನಾ.ಸು. ಹರ್ಡಿಕರ್, ಅಂಬಲಿ ಚನ್ನಬಸಪ್ಪ, ಕೆ.ಸಿ. ರೆಡ್ಡಿ, ಟೇಕೂರು ಸುಬ್ರಮಣ್ಯಂ ಕೆ.ಟಿ. ಭಾಷ್ಯಂ, ಹೆಚ್. ಸಿ. ದಾಸಪ್ಪ, ವೀರಣ್ಣಗೌಡ. ಶ್ರೀರಂಗ ಕಾಮತ್, ಬಿಂಧುಮಾದವ ಬುರ್ಲಿ, ನರಸಿಂಹದಾಬಡೆ, ಸಂಗೂರು ಕರಿಯಪ್ಪ, ವೆಂಕಟೇಶ್ ಮಾಗಡಿ, ಕೆ ಬಿ. ದುಂದುರ್, ಶಂಕರ್ ಕುರ್ತಕೋಟಿ ಮುಂತಾದ ಮಹನೀಯರು ತೋರಿದ ನಿಸ್ವಾರ್ಥ ಮನೋಭಾವ ಮತ್ತು ತ್ಯಾಗಜೀವನ ಸದಾಸ್ಮರಣೀಯ. ರಾಜ್ಯದ ಮಾಜಿ ಮುಖ್ಯಮಂತ್ರಿ ಹಾಗೂ ಹಿರಿಯ ಮುತ್ಸದ್ದಿ ಸಿದ್ದವ್ವನಹಳ್ಳಿ ನಿಜ-ಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಕಡಿದಾಳ ಮಂಜಪ್ಪ, ಶಿಕ್ಷಣ ತಜ್ಞ ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ ಡಾ. ಹೆಚ್. ನರಸಿಂಹಯ್ಯನವರಂತಹ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನಡುವೆ ಇದ್ದು ನಿರಂತರ ಸ್ಫೂರ್ತಿಯ ನೆಲೆಯಾಗಿರುವುದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ಸಂಗತಿ.

ವಿಜ್ಞಾನ, ಕೃಷಿ, ನೀರಾವರಿ ಕ್ಷೇತ್ರಗಳಲ್ಲಿ ಮಹತ್ತರ ಪ್ರಗತಿಯನ್ನು ಸಾಧಿಸಿ ದೇಶ ಅಭಿವೃದ್ಧಿ ಶೀಲ ದೇಶಗಳ ಸಾಲಿನ ಮುಂಚೂಣಿಯಲ್ಲಿದೆ.

ರಾಷ್ಟ್ರದ ಅಭಿವೃದ್ಧಿಯ ಜತೆಜತೆಯಲ್ಲಿ ಕರ್ನಾಟಕವು ಗಮನಾರ್ಹ ಪ್ರಗತಿ ಸಾಧಿಸುತ್ತಾ ಇಡೀ ದೇಶದ ದೃಷ್ಟಿಯನ್ನೆ ತನ್ನೆಡೆಗೆ ಸೆಳೆದಿದೆ.



ಆಡಳಿತ ಯಂತ್ರವನ್ನು ಚುರುಕುಗೊಳಿಸಿ ಸರ್ಕಾರವನ್ನು ಜನರ ಸಮೀಪಕ್ಕೊಯ್ಯಲು ಮತ್ತಷ್ಟು ಅವಕಾಶವಾಗುವಂತೆ ಒಂಭತ್ತು ಹೊಸ ಜಿಲ್ಲೆಗಳ ಆರಂಭಕ್ಕೆ ಕ್ರಮ. ಮೊದಲ ಹಂತದಲ್ಲಿ 7 ಜಿಲ್ಲೆಗಳ ಉದಯ. 40 ವರ್ಷಗಳಿಂದಲೂ ನೆನೆಗುದಿಯಲ್ಲಿದ್ದ ಈ ವಿಷಯದಲ್ಲಿ ಸರ್ಕಾರದ ದಿಟ್ಟ ನಿರ್ಧಾರದ ಮೂಲಕ ಅಂತಿಮ ತೆರೆ.

ಅಧಿಕಾರ ವಿಕೇಂದ್ರಿಕರಣಗೊಂಡು ಪರಿಣಾಮಕಾರಿ ಆಡಳಿತ ಸಿಗುವಂತಾಗಲು ಸರ್ಕಾರ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್‌ಗಳಿಗೆ ಚುನಾವಣೆ ನಡೆಸಿ ಜನರ ಕೈಗೆ ಅಧಿಕಾರ ಕೊಟ್ಟು ಪ್ರಜಾಪ್ರಭುತ್ವಕ್ಕೆ ಭದ್ರ ಬುನಾದಿ ಹಾಕಿದೆ.

ರಾಜ್ಯದ ಗ್ರಾಮೀಣ ಬದುಕಿನಲ್ಲಿ ಹೊಸ ಬೆಳಕು ಮೂಡಿಸಿ ಜನರಲ್ಲಿ ಅದಮ್ಯ ಚೆತನ್ಯ ತರಲು ಸ್ವಸ್ತಿ ಗ್ರಾಮ ಯೋಜನೆ ಎಂಬ ವಿನೂತನ ಯೋಜನೆ ಆರಂಭ. ಈಮೂಲಕ ಮಹಾತ್ಮಗಾಂಧೀಜಿಯವರ ಕನಸಿನ ಸಾಕಾರಕ್ಕೆ ಸಂಕಲ್ಪ. ಈ ಯೋಜನೆಯಡಿ ಮೊದಲ ಹಂತವಾಗಿ ರಾಜ್ಯದ ಪ್ರತಿ ಜಿಲ್ಲೆಯಿಂದ ಅತ್ಯಂತ ಹಿಂದುಳಿದ ಒಂದೊಂದು ಗ್ರಾಮವನ್ನು ಆಯ್ಕೆ ಮಾಡಿ ಅದನ್ನು ಮಾದರಿ ಮತ್ತು ಆಧುನಿಕ ಗ್ರಾಮವನ್ನಾಗಿಸಲು, ಸನ್ನದ್ದತೆ. 27.000 ಗ್ರಾಮಗಳಲ್ಲಿ ವಾಸಿಸುತ್ತಿರುವ 350 ಲಕ್ಷ ಗ್ರಾಮೀಣ ಜನರ ಮೊಗದಲ್ಲಿ ನಗೆಹೊನಲಿಗೆ ನಾಂದಿ.

50ನೇ ಸ್ವಾತಂತ್ರ್ಯೋತ್ಸವದ ಕೊಡುಗೆ :- ಸ್ವಾತಂತ್ರ್ಯ ಹೋರಾಟಗಾರರ ಮಾಸಾಶನ ರೂ. 750ಕ್ಕೆ ಹೆಚ್ಚಳ. 10,000 ಶಾಲಾ ಕೊಠಡಿಗಳ ನಿರ್ಮಾಣ. 18,500 ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ. ಶಾಲೆಗಳೇ ಇಲ್ಲದ ಪ್ರದೇಶಗಳಲ್ಲಿ 2000 ನೂತನ ಕಿರಿಯ ಪ್ರಾಥಮಿಕ ಶಾಲೆಗಳ ಆರಂಭ. 2000 ಕಿರಿಯ ಪ್ರಾಥಮಿಕ ಶಾಲೆಗಳ ಪ್ರಾರಂಭಕ್ಕೆ ಕ್ರಮ. ಗ್ರಾಮೀಣ ಪ್ರದೇಶಗಳಲ್ಲಿ ಜನರಿಗೆ ತಮ್ಮ ಅಗತ್ಯ-ಗಳನ್ನು ಸುಲಭವಾಗಿ ಪಡೆದುಕೊಳ್ಳುವಂತಾಗಲು ಸುಧಾರಿತ ರಸ್ತೆ ಸಂಪರ್ಕ.

ಭಾರತ ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಶುಭದಿನದಂದು ನಾವೆಲ್ಲರೂ
ಸ್ವಾತಂತ್ರ್ಯ ಹೋರಾಟದ ಘನ ಉದ್ದೇಶಕ್ಕೆ ನಮ್ಮನ್ನು ಪುನರ್ ಸಮ
ರ್ಪಿಸಿಕೊಳ್ಳೋಣ. ನಮ್ಮ ಸ್ವಾತಂತ್ರ್ಯ ನೇತಾರರ ಕನಸನ್ನು
ನನಸಾಗಿಸಲು ಕಂಕಣ ಬದ್ಧರಾಗೋಣ.

ಶ್ರೀ ಜೆ. ಹೆಚ್. ಪಟೇಲ್
ಮಾನ್ಯ ಮುಖ್ಯಮಂತ್ರಿಗಳು.

ಸುವರ್ಣಭಾರತ—ಸಮೃದ್ಧ ಕರ್ನಾಟಕ

ಕರ್ನಾಟಕ ವಾರ್ತೆ.

## : ಸ್ಮರಣೆ :



ಉತ್ತಮ ಯೋಗ್ಯ ವ್ಯಕ್ತಿಗಳ ಗುಣ ಲಕ್ಷಣಗಳು ಚೈತನ್ಯ ನೀಡಿ ಪ್ರಭಾವಿತರನ್ನಾಗಿ ಮಾಡುತ್ತವೆ ಅಂಥಹ ಸಮೂಹಕ್ಕೆ ದಿವಂಗತ ಪಿ ಬಿ. ಗುರುದತ್, ಶಿಕ್ಷಕರು, ಸನಿವಾಸ ಪ್ರೌಢಶಾಲೆ, ಶ್ರೀ ಸಿದ್ಧಗಂಗಾ ಮಠ ಇವರು ಸೇರುತ್ತಾರೆ. ಜನ್ಮಸ್ಥಳ ವೈ. ಎನ್. ಹೊಸಕೋಟೆ, ತುಮಕೂರು ಜಿಲ್ಲೆ. ತಮ್ಮ ಮಾತಾಪಿತೃಗಳಿಂದ ಶ್ರೇಷ್ಠ ಗುಣಗಳನ್ನು ಅಳವಡಿಸಿಕೊಂಡು ಶಿಕ್ಷಕ ಸೇವೆಯಲ್ಲಿ ವಿದ್ಯಾರ್ಥಿಗಳ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದರು. ಆಡಂಬರವಿಲ್ಲದ ಸರಳ ಜೀವಿಯಾಗಿದ್ದರು. ವಿಜ್ಞಾನ ಮತ್ತು ಗಣಿತ ಬೋಧನೆಯಲ್ಲಿ ತುಂಬಾ ಯಶಸ್ಸನ್ನು ಗಳಿಸಿದ್ದರು. ಮಿತ ಭಾಷಿ ಮತ್ತು ಸೌಮ್ಯ ಲಕ್ಷಣಕ್ಕೆ ಹೆಸರಾಗಿದ್ದರು. ಇವರ ಪುತ್ರ ಆರ್. ಅಶ್ವಿನಿದತ್ ಬಹಳ ಬುದ್ಧಿಶಾಲಿ. ತುಮಕೂರು ಸಿದ್ಧಾರ್ಥ ವೈದ್ಯಕೀಯ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ. ಶ್ರೀಮಠದ ಗ್ರಾಮಾಂತರ ಪ್ರೌಢಶಾಲೆಗಳಾದ ಬೆಳಧರ, ಹೊಸಹಳ್ಳಿಗಳಲ್ಲಿ ಗಮನಾರ್ಹ ಸೇವೆ ಸಲ್ಲಿಸಿ ಶ್ರೀ ಮಠದ ಬೃಹತ್ ಸನಿವಾಸ ಪ್ರೌಢಶಾಲೆಯಲ್ಲಿ ಸೇವೆ ಸಲ್ಲಿಸುತ್ತಾ ಸಹೋದ್ಯೋಗಿ ಮಿತ್ರರ ಮೆಚ್ಚುಗೆಗೆ ಪಾತ್ರರಾಗಿದ್ದರು. ಪರೋಪಕಾರಿ ಗುಣ ಅವರಲ್ಲಿ ಬಾಲ್ಯದಿಂದಲೂ ಬೆಳೆದು ಬಂದಿತ್ತು. ಅವರ ಸರಳ ಸೌಜನ್ಯ ಕ್ರಿಯಾಶೀಲತೆಗಳು ಸದಾ ಸ್ಮರಣೆಗೆ ಬರುತ್ತವೆ. 16-6-1997 ಸೋಮವಾರ ಆಕಸ್ಮಿಕ ಅಪಘಾತಕ್ಕೆ ಒಳಗಾಗಿ ವಿಧಿವಶರಾದರು ಅವರ ಆತ್ಮಕ್ಕೆ ಚಿರಶಾಂತಿ ದೊರಕಲಿ ಮತ್ತು ಅವರ ಕುಟುಂಬದವರಿಗೆ ದುಃಖ ಸಹಿಸುವ ಶಕ್ತಿ ನೀಡಿ ಆಯುರಾರೋಗ್ಯ ಸುಖ ಸಂಪದ ನೀಡಲೆಂದು " ಸಿದ್ಧಗಂಗಾ " ಪ್ರಾರ್ಥಿಸುತ್ತದೆ.

## ' ಕ್ಷೇತ್ರ ವಾರ್ತೆ '

ಕೆ. ಬಿ. ಶಿವಶಂಕರಯ್ಯ

### ಸ್ವಾತಂತ್ರ್ಯ ಸುವರ್ಣ ಮಹೋತ್ಸವ

ಸ್ವಾತಂತ್ರ್ಯ ಸ್ವರ್ಣ ಮಹೋತ್ಸವವು ಶ್ರೀ ಕ್ಷೇತ್ರದಲ್ಲಿ ಆಗಸ್ಟ್ 1997 ಶುಕ್ರವಾರ ಶ್ರೀ ಮಠದ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾನಿಧ್ಯದಲ್ಲಿ ನಡೆಯಿತು.

ಸ್ವರ್ಣ ಮಹೋತ್ಸವದ ಸವಿನೆನಪಿಗಾಗಿ 1997ರ ಆಗಸ್ಟ್ 14ರ ಸಂಜೆ ಸ್ಕೌಟ್ ಮತ್ತು ಎನ್.ಸಿ.ಸಿ. ವಿದ್ಯಾರ್ಥಿಗಳಿಂದ ಪಂಜಿನ ಮೆರವಣಿಗೆ ನಡೆಯಿತು. ಜನತೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ ಅಜ್ಞಾನದಿಂದ ಜ್ಞಾನದ ಕಡೆಗೆ, ಅಸತ್ಯದಿಂದ ಸತ್ಯದ ಕಡೆಗೆ, ಸಾಗಬೇಕೆಂದು ಈ ಪಂಜಿನ ಮೆರವಣಿಗೆ ಎಚ್ಚರಿಕೆಯನ್ನು ಕೊಟ್ಟಿತು.

ನಂತರ ಆಗಸ್ಟ್ 15, 97ರ ಶುಕ್ರವಾರ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮಿಗಳವರ ಸಾನಿಧ್ಯದಲ್ಲಿ ಕಾರ್ಮಿಕಖಾತೆ ಸಚಿವರಾದ ಶ್ರೀ ಬಿ. ಸತ್ಯನಾರಾಯಣ ರವರು ಧ್ವಜಾರೋಹಣ ಮಾಡಿ ವಿದ್ಯಾರ್ಥಿಗಳ ಪಥ ಸಂಚಲನೆಯ ವಂದನಾ ಸ್ವೀಕಾರ ಮಾಡಿದರು. ಅನಂತರ ವಿದ್ಯಾರ್ಥಿಗಳಿಂದ ಕವಾಯತ್ ಪ್ರದರ್ಶನ ನಡೆಯಿತು.

ಭಾರತದ ಇತಿಹಾಸದಲ್ಲಿ ಆಗಸ್ಟ್ 15, ಸಂಸ್ಮರಣೀಯದಿನ. ಅಸಂಖ್ಯಾತ ದೇಶ ಭಕ್ತರ ತ್ಯಾಗ ಬಲಿದಾನಗಳಿಂದ ನಮ್ಮ ಸ್ವಾತಂತ್ರ್ಯ ಮಹಾಸೌದ ನಿರ್ಮಾಣವಾಗಿದೆ. ಇಂದು ದೇಶ ಸ್ವಾತಂತ್ರ್ಯದ ಸುವರ್ಣಮಹೋತ್ಸವ ಆಚರಿಸುತ್ತಿದೆ. ಹಲವಾರು ರಂಗಗಳಲ್ಲಿ ಸಾಧನೆ ಮಾಡಿರುವುದರ ಬಗ್ಗೆ ಹೆಮ್ಮೆ ಇದೆ. ಇಂದು ಸಾಮಾಜಿಕ ಪರಿ- ಸ್ಥಿತಿ ನೋಡಿ ವ್ಯಥೆಪಡಬೇಕಾಗಿದೆ ಸಭ್ಯ ಸಂಸ್ಕೃತಿ ಆಚರಣೆಯಿಲ್ಲದೆ ರಾಷ್ಟ್ರನೈತಿಕ ಶೋಷಣೆಗೆ ಒಳಗಾಗಿದೆ. ಆದರ್ಶತ್ವ ಕಣ್ಮರೆಯಾಗುತ್ತಿದೆ. ಎಲ್ಲರು ಉತ್ತಮ ಪ್ರಜೆಗಳಾಗಿ ರಾಷ್ಟ್ರವನ್ನು ಮುನ್ನಡೆಸಲು ಕ್ರಿಯಾಶೀಲರಾಗಬೇಕೆಂದು ಕರೆಯಿತ್ತರು.

ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು ಆಶೀರ್ವಚನ ಮಾಡುತ್ತ ಸಹಸ್ರಾರು ದೇಶಪ್ರೇಮಿಗಳ ನಿರಂತರ ಹೋರಾಟದ ಫಲವಾಗಿ ನಮಗೆ ಸ್ವಾತಂತ್ರ್ಯ ಲಭಿಸಿದೆ. ಅದನ್ನು ಉಳಿಸಿಕೊಂಡು ಹೋಗುವ ಜವಬ್ದಾರಿ ಯುವ ಜನಾಂಗದ ಮೇಲೆ ಇದೆ. ಅಮೇರಿಕಾದ ಅಧ್ಯಕ್ಷರಾಗಿದ್ದ ಜಾನ್ ಎಫ್. ಕೆನಡಿಯವರು ಹೇಳು- ತ್ತಾರೆ. "ದೇಶ ನಮಗೆ ಎನು ಕೊಟ್ಟಿದೆ ಎನ್ನುವುದಕ್ಕಿಂತ ದೇಶಕ್ಕಾಗಿ ನಿನ್ನಕೊಡುಗೆ ಎನು?" ಎಂದು ಪ್ರತಿಯೊಬ್ಬರು ಚಿಂತಿಸಬೇಕು. ಎಂಬ ಕೆನಡಿಯವರ ಮಾತನ್ನು ಉದಾಹರಿಸಿದರು ಕಾಯ, ವಾಚ, ಮನಸಾ, ಪರಿಶುದ್ಧರಾಗಿ ಸ್ವಾರ್ಥವನ್ನು ಬಿಟ್ಟು ಪ್ರಾಮಾಣಿಕರಾಗಿ ರಾಷ್ಟ್ರಸೇವೆಯಲ್ಲಿ ತೊಡಗಬೇಕು ಎಂದು ಆಶಿಸಿದರು.

**ಶ್ರೀ ಶ್ರೀ ಗಳವರ ಸಂದೇಶ :-**

ದೇಶ ಸ್ವತಂತ್ರವಾಗಿ ಐವತ್ತು ವರ್ಷಗಳು ಗತಿಸಿದವು. ಸ್ವತಂತ್ರ ಭಾರತದಲ್ಲಿ ಹುಟ್ಟಿ ಬೆಳೆದ ನಮ್ಮ ಎಳೆಯರಿಗೆ, ತರುಣರಿಗೆ, ಸ್ವಾತಂತ್ರ್ಯ ಹೋರಾಟದ ನೋವು ನಲಿವುಗಳ ಅರಿವು ಇಲ್ಲದಿರುವುದು ಸ್ವಾಭಾವಿಕ. ಸತ್ಯ ಅಹಿಂಸೆಗಳ ಮಾರ್ಗದಲ್ಲಿ ಹೋರಾಡಿ ಮಹಾತ್ಮ ಗಾಂಧೀಜಿಯವರು ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರೇನೋ ನಿಜ. ಜತೆಗೆ ಆಗಿನ ಕ್ರಾಂತಿಕಾರಿ ತರುಣರು ಮಾಡಿದ ತ್ಯಾಗ ಬಲಿದಾನಗಳ ಕಥೆ ದೊಡ್ಡದು. ಹಲವರು ಪೋಲಿಸರ ಲಾಠಿ ಏಟುಗಳಿಗೆ ಅಂಗವಿಕಲರಾದರು. ಕೆಲವರು ದೀರ್ಘಕಾಲ ಸೆರಮನೆಯ ಕತ್ತಲಲ್ಲಿಯೇ ಇದ್ದು ಕೊನೆಯುಸಿರೆಳೆದರು. ಬಹುಜನ ಪೋಲಿಶರ ಗುಂಡಿಗೆ ಆಹುತಿಯಾದರು ಇನ್ನು ಕೆಲವರು ನೇಣುಗಂಬವನೇರಿದರು ಈ ಎಲ್ಲರ ರಕ್ತ ತರ್ಪಣದಿಂದ ಸ್ವಾತಂತ್ರ್ಯ ಸೂರ್ಯ ಉದಯಿಸಿದೆ.

ಈ ರೀತಿ ದೊರೆತ ಸ್ವಾತಂತ್ರ್ಯ ಇಂದು ಆಡಂಬರದ ಉತ್ಸವಗಳಲ್ಲಿ ತೊಡಗಿ ಆಚರಣೆಯಿಲ್ಲದೆ ಅರ್ಥ ಮತ್ತು ಮೌಲ್ಯಗಳನ್ನು ಕಳೆದುಕೊಂಡಿದೆ. ನಡೆ-ನುಡಿಯಲ್ಲಿ ಸಾಮರಸ್ಯವಿಲ್ಲ, ವಿನಯಶೀಲತೆ ನಾಶವಾಗಿದೆ. ಮಾನವೀಯ ಅನುಕಂಪ ಮಾಯವಾಗಿದೆ. ವೇದಗಳ ಕಾಲದಿಂದ ಬಂದ ಭವ್ಯಪರಂಪರೆ, ಸಂಸ್ಕೃತಿ ಆಚರಣೆಯಿಲ್ಲದೆ ಕಣ್ಮರೆಯಾಗುತ್ತಿದೆ. ಸ್ವಾತಂತ್ರ್ಯವನ್ನುಮನಬಂದಂತೆ ಬಳಸಿಕೊಂಡರೆ ಸ್ವತಂತ್ರವಾಗಿ ಸಂತೋಷವಾಗಿರಲು ಕಾಡಿಗೆ ಹೋದ ಕುರಿ ತೋಳನ ಕೈಗೆಸಿಕ್ಕಂತಾಗುತ್ತದೆ. ಅನೈಕ್ಯತೆಯ ಪರಿಣಾಮ ದೇಶದ ಸ್ವಾತಂತ್ರ್ಯ ಅಪಹರಣವಾಯಿತು. ಗಳಿಸಿಕೊಂಡಿರುವ ಸ್ವಾತಂತ್ರ್ಯವನ್ನು ರಕ್ಷಣೆಮಾಡುವ ಜವಾಬ್ದಾರಿ ಎಲ್ಲರ ಮೇಲಿದೆ. ಇಂದು ಜೀವನ ವಿಲಕ್ಷಣವಾಗಿದೆ. ಅಣು ಬಾಂಬುಗಳಭಯ ತಪ್ಪಿಲ್ಲ. ಪ್ರತಿವ್ಯಕ್ತಿ, ಪ್ರತಿಕುಟುಂಬ ನೆಮ್ಮದಿ ಸುಖದಿಂದ ಬಾಳಬೇಕು. ಆರಾಮ ಜೀವನ ಸಲ್ಲದು. ಜನಜಾಗೃತರಾಗಬೇಕು, ರಾಷ್ಟ್ರ ನಾಯಕರು ಸ್ವಾರ್ಥಬಿಟ್ಟು ಪ್ರಾಮಾಣಿಕರಾಗಬೇಕು. ರಾಷ್ಟ್ರಸೇವೆಯಲ್ಲಿ ತೊಡಗಬೇಕು ಎಂದು ಆಶಿಸಿದರು.

ಪ್ರಾರಂಭದಲ್ಲಿ ಎಲ್ಲಾ ಸನಿವಾಸ ವಿದ್ಯಾಸಂಸ್ಥೆಗಳ ವಿದ್ಯಾರ್ಥಿಗಳಿಂದ ಸ್ವಾತಂತ್ರ್ಯ ದಿನಾಚರಣೆಯನ್ನು ಪ್ರತಿಬಿಂಬಿಸುವ ವೈವಿಧ್ಯತೆಯುಳ್ಳ ಸಾಂಸ್ಕೃತಿಕ ಕಾರ್ಯಕ್ರಮ ನಡೆದವು.

ಶ್ರೀ ಎಂ. ನಂದೀಶ್ ಸ. ಶಿ. ಪ್ರಾರ್ಥನೆ ಮಾಡಿದರು. ಶ್ರೀ ಪಿ.ಎನ್. ಚಂದ್ರಶೇಖರಯ್ಯ, ಪ್ರಾಚಾರ್ಯರು ಸ್ವಾಗತಿಸಿದರು. ಶ್ರೀ ಎಸ್. ಷಡಕ್ಷರಿ, ಸಹ ಪ್ರಾಧ್ಯಾಪಕರು ವಂದನೆ ಸಲ್ಲಿಸಿದರು. ಶ್ರೀ ಜಿ. ಸಿ ರಾಜಶೇಖರಯ್ಯ ಸಹ-ಪ್ರಾಧ್ಯಾಪಕರು ಕಾರ್ಯಕ್ರಮ ನಿರೂಪಿಸಿದರು.

## ವೀರಶೈವ ಸಮಾಜ ಬಾಂಧವರಲ್ಲಿ ಕಳಕಳಿಯ ಬಿನ್ನಹ

—ಡಾ॥ ಎಸ್. ಆರ್. ಗುಂಜಾಳ, ನಿರ್ದೇಶಕರು, ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಶ್ರೀ ನಾಗನೂರ ರುದ್ರಾಕ್ಷಿಮಠ, ಶಿವಬಸವನಗರ, ಬೆಳಗಾವಿ-10

ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿಯವರು ತಮ್ಮ ಶಿವಾನುಭವ ಪತ್ರಿಕೆಯನ್ನು 35 ವರ್ಷಗಳಷ್ಟು ದೀರ್ಘಕಾಲ ಪ್ರಕಟಿಸುತ್ತ (1926-61) ಬಂದರು. ಇದರ ಮುಖಾಂತರ 1) ಶಿವಶರಣರ ವಚನಗಳು 2) ಶಿವಾನುಭವ ಪಠ್ಯಪುಸ್ತಕಗಳು 3) ವಚನಶಾಸ್ತ್ರಸಾರದ ಭಾಗಗಳು 4) ವೀರಶೈವ ಐತಿಹಾಸಿಕ ಗ್ರಂಥಗಳು 5) ರಾಜಕೀಯ ಪುರುಷರ ಚರಿತ್ರೆಗಳು 6) ಧಾರ್ಮಿಕ ಪುರುಷರ ಚರಿತ್ರೆಗಳು 7) ಶಿವಾನುಭವ ಶಬ್ದಕೋಶ 8) ಕಾವ್ಯಗಳು 9) ರಗಳೆಗಳು ಇತ್ಯಾದಿ ಗ್ರಂಥಗಳನ್ನು ಪ್ರಕಟಿಸಿ ಸಂಶೋಧನೆಗೆ ನಾಂದಿ ಹಾಡಿರುವರು.

ಡಾ. ಹಳಕಟ್ಟಿಯವರು "ಶಿವಾನುಭವ" ಪತ್ರಿಕೆಯಲ್ಲಿ ಕೆಳಕಂಡ ಪ್ರಮುಖ ವಿಷಯಗಳ ಮೇಲೆ ಲೇಖಗಳನ್ನು ಪ್ರಕಟಿಸಿರುವರು.

1) ವಾಙ್ಮಯ ಸಂಶೋಧನೆ
2) ಐತಿಹಾಸಿಕ ಸಂಶೋಧನೆಗಳು
3) ಮಧ್ಯಯುಗದಲ್ಲಿ ವೀರಶೈವೇತಿಹಾಸ
4) ಐತಿಹಾಸಿಕ ಮಹಾಪುರುಷರ ಚರಿತ್ರೆಗಳು
5) ಮಠಾಧಿಕಾರಿಗಳು ಮತ್ತು ಸಾಧು ಸತ್ಪುರುಷರು
6) ಶಿವಶರಣರ ಚರಿತ್ರೆಗಳು
7) ಬಸವೇಶ್ವರ ಚರಿತ್ರೆ
8) ಪುಣ್ಯಕ್ಷೇತ್ರಗಳು ಮತ್ತು ಐತಿಹಾಸಿಕ ಪ್ರಸಿದ್ಧ ಸ್ಥಳಗಳು
9) ಗ್ರಂಥಕಾರರು
10) ಆಂಧ್ರ ವೀರಶೈವ ವಾಙ್ಮಯ
11) ಆಂಧ್ರ ಮತ್ತು ತಮಿಳುನಾಡುಗಳಲ್ಲಿಯ ಸಮಾಜಗಳ ವೃತ್ತಾಂತಗಳು
12) ತಮಿಳು ಶೈವ ವಾಙ್ಮಯ
13) ಆಗಮ ಗ್ರಂಥಗಳು
14) ಧರ್ಮಗಳ ತುಲನಾತ್ಮಕ ವಿವೇಚನೆಗಳು
15) ಶಿವಾನುಭವ ತತ್ವಗಳು
16) ಶೂನ್ಯ ಸಂಪಾದನೆ
17) ಷಟ್‌ಸ್ಥಲ ವಿವೇಚನೆ
18) ಏಕೋತ್ತರ ಶತಸ್ಥಲಗಳು
19) ಲಿಂಗಪೂಜೆ ಮತ್ತು ಯೋಗಾಭ್ಯಾಸ

20) ಪಂಚಾಚಾರಗಳು ಮತ್ತು ಸಪ್ತಾಚಾರಗಳು
21) ಅಷ್ಟಾವರಣಗಳು
22) ಗುರುಲಿಂಗ ಜಂಗಮಗಳು
23) ಪಾದೋದಕ ಪ್ರಸಾದ
24) ವರ್ಣಾಶ್ರಮ ಧರ್ಮಗಳು ಮತ್ತು ಜಾತಿ ಭೇದಗಳು
25) ವೀರಶೈವ ಸಮಾಜ ಸುಧಾರಣೆಯ ಬಗ್ಗೆ ಸಾಮಾನ್ಯ ಲೇಖನಗಳು
26) ವಾದ ಭೂಮಿ ಇತ್ಯಾದಿ.

ಹೀಗೆ ಮಹತ್ವದ ವಿಷಯಗಳ ಮೇಲೆ ವಿವಿಧ ಸಂಶೋಧಕರಿಂದ ಬರೆಯಲ್ಪಟ್ಟ ಸಾವಿರಾರು ಲೇಖನಗಳನ್ನು "ಶಿವಾನುಭವ" ಪತ್ರಿಕೆಯಲ್ಲಿ ಪ್ರಕಟಿಸಿರುವರು. ಇಂದಿನ ಮತ್ತು ಮುಂದಿನ ಸಂಶೋಧಕರು ಈ ಲೇಖನಗಳನ್ನು ಅವಲೋಕಿಸಿ ತಮ್ಮ ಹೊಸ ವಿಚಾರಗಳನ್ನು ಹೇಳುವ ಅವಶ್ಯಕತೆ ಇದೆ.

ಈ ಹಿನ್ನಲೆಯಲ್ಲಿ ನಮ್ಮ ಗ್ರಂಥಾಲಯದಲ್ಲಿ "ಶಿವಾನುಭವ" ಪತ್ರಿಕೆಯ ಪ್ರಾರಂಭದ 13 ಸಂಪುಟಗಳನ್ನು ಸಂಪೂರ್ಣವಾಗಿ ಸಂಗ್ರಹಿಸಿದ್ದೇವೆ. ಉಳಿದ 22 ವರ್ಷಗಳ ಸಂಪುಟಗಳು (1939—1961) ಎಷ್ಟು ಪ್ರಯತ್ನಿಸಿದರೂ ಸಿಗುತ್ತಿಲ್ಲ. ಈ ಎಲ್ಲ ಸಂಪುಟಗಳಲ್ಲಿ ಪ್ರಕಟವಾದ ಲೇಖನಗಳ ವರ್ಗೀಕೃತ ಸೂಚಿಯೊಂದನ್ನು (Classified Index of articles) ಸಿದ್ಧಪಡಿಸುವ ಮಹೋದ್ದೇಶವನ್ನು ಹೊಂದಿದ್ದೇವೆ. ಈಗಾಗಲೇ ನಮ್ಮಲ್ಲಿರುವ 13 ಸಂಪುಟಗಳಲ್ಲಿಯ ಲೇಖನಗಳಿಗೆ ಉಲ್ಲೇಖಗಳನ್ನು ಸಿದ್ಧಪಡಿಸಿದ್ದೇವೆ. ಆದರೆ ಉಳಿದ "ಶಿವಾನುಭವ" ಸಂಪುಟಗಳಾಗಲೀ ಸಂಚಿಕೆಗಳಾಗಲೀ ನಮ್ಮಲ್ಲಿ ಇಲ್ಲದ್ದರಿಂದ ನಮ್ಮ ಸೂಚಿ ಕಾರ್ಯ ಸ್ಥಗಿತಗೊಂಡಿದೆ. ಕಾರಣ ಶಿವಾನುಭವ ಪತ್ರಿಕೆಯ ಹಿಂದಿನ ಸಂಪುಟಗಳು (1939—1961) ಯಾರಲ್ಲಾದರೂ ಲಭ್ಯವಿದ್ದರೆ ನಮಗೆ ಕಳುಹಿಸಿಕೊಟ್ಟು ಉಪಕರಿಸಬೇಕೆಂದು ಕೋರುತ್ತೇವೆ. ಅವು ಯಾರಲ್ಲಿ ಲಭ್ಯವಿರುವವೋ ಅವರ ವಿಳಾಸಗಳನ್ನು ತಿಳಿಸಿದರೆ ನಾವು ನೇರವಾಗಿ ಅವರೊಂದಿಗೆ ಸಂಪರ್ಕಿಸುವೆವು. ನಮ್ಮ ಜ್ಞಾನದಾಸೋಹದ ಈ ಮಣಿಹದಲ್ಲಿ ವೀರಶೈವ ಸಮಾಜ ಬಾಂಧವರು, ವಿದ್ವಾಂಸರು ನಮ್ಮೊಂದಿಗೆ ಸಹಕರಿಸಬೇಕೆಂದು ಪ್ರಾರ್ಥಿಸುತ್ತೇವೆ.


**ಕಡಿಮೆ ಹಣ ಖರ್ಚುಮಾಡಿ**

**ಹೆಚ್ಚು ಬಟ್ಟೆಗಳನ್ನು ಒಗೆಯಿರಿ.**

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚುಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ' ನೀಲಂ ಬಾರ್ ಸೋಪ್ 'ಕಸ್ತೂರಿ' ನೀಲಂ ಬಾರ್ ಸೋಪ್

ರಾಮಕೃಷ್ಣ ಆಯಿಲ್ ಮಿಲ್, ತುಮಕೂರು

ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ನಂ. 1, ಅಕ್ಕಮಹಾದೇವಿ ರಸ್ತೆ, ಅಕ್ಕಿಪೇಟೆ ಬೆಂಗಳೂರು-560053.

ದೂರವಾಣಿ : 2871003
2282224

ಶಾಖೆಗಳು : ನಂ. 265 ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ ಬೆಂಗಳೂರು–560082. ದೂರವಾಣಿ 649183

ನಂ. 391:32, 12ನೇ ಮುಖ್ಯ ರಸ್ತೆ, 6ನೇ ವಿಭಾಗ, ಡಾ|| ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು–10. ದೂರವಾಣಿ : 3402145

ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.

ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.

ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸಲು ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

(31-1-1997 ರಲ್ಲಿದ್ದಂತೆ)
(ಲಕ್ಷ ರೂ.ಗಳಲ್ಲಿ)

| | | |
|---|---|---|
| ಷೇರು ಬಂಡವಾಳ | : | 52.63 |
| ಸಾಲಗಳು ಮತ್ತು ಮುಂಗಡ | : | 617.06 |
| ಠೇವಣಿಗಳು | : | 1272.27 |
| ಹೂಡಿಕೆಗಳು | : | 582.07 |
| ದುಡಿಯುವ ಬಂಡವಾಳ | : | 1481.61 |

ನಮ್ಮಲ್ಲಿ ಹಣ ತೊಡಗಿಸಿ, ನಿಮ್ಮ ನೆರವಿಗೆ ನಮ್ಮೊಡನೆ ಸಹಕರಿಸಿ

ಶ್ರೀ ಬಿ. ಎಸ್. ಪರಮಶಿವಯ್ಯ ಎಂ.ಎ.
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

ನಿರ್ದೇಶಕರುಗಳು

ಶ್ರೀ ಆರ್. ನೀಲಕಂಠಯ್ಯ
ಶ್ರೀ ಬಿ.ಟಿ. ಉಮೇಶ್
ಶ್ರೀ ಬಿ.ಎಂ. ಶ್ರೀಕಂಠಸ್ವಾಮಿ
ಶ್ರೀ ದಕ್ಷಿಣಾಮೂರ್ತಿ,
ಶ್ರೀ ಆರ್.ಜಿ. ಶಿವಕುಮಾರ್,
ಶ್ರೀ ವೈ. ಟಿ. ಮಹಾದೇವಪ್ಪ
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ
ಶ್ರೀ ಬಿ. ಬಸವರಾಜು
ಶ್ರೀ ಬಿ.ಜಿ. ನಾಗಬಸಪ್ಪ,
ಶ್ರೀ ಜಿ. ಶಿವಕುಮಾರ್
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಡಾ|| ಮಲ್ಲಿಕಾರ್ಜುನ
ಶ್ರೀಮತಿ ಎಸ್. ಗಿರಿಜಾ,

ಪ್ರಧಾನ ವ್ಯವಸ್ಥಾಪಕರು :
ಶ್ರೀ ಬಿ. ವಿ. ನಾಗರಾಜ



"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ, ಕರ್ಮಕ್ಕೆ ಮೊದಲು, ಮರ್ಮವನರಿಯುವ ಮಾಟ ಸುಯಿದಾನದ ಕೇಡು ! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

–ಶ್ರೀ ಬಸವೇಶ್ವರ

ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್
ಪ್ರೈ. ಲಿಮಿಟೆಡ್.

21/2, ಆರಾಧ್ಯ ಕಾಂಪ್ಲೆಕ್ಸ್ ವಾಣಿವಿಲಾಸ ರಸ್ತೆ,
ಬೆಂಗಳೂರು-560004.

ದೂರವಾಣಿ :
ಕಛೇರಿ : 623773 ಮನೆ : 262455

ಉಳಿತಾಯವೇ ಆಪದ್ಧನ! ಆಪದ್ಧನವೇ ನಿಮ್ಮ ಭವಿಷ್ಯ !

ತುಮಕೂರು ನಗರದ ಅತ್ಯುತ್ತಮ ಸಹಕಾರಿ ಬ್ಯಾಂಕ್

## ನಿಮ್ಮ ಸುಭದ್ರ ಭವಿಷ್ಯತೆಗಾಗಿ ನಮ್ಮ ಉಳಿತಾಯ ಯೋಜನೆಗಳಲ್ಲಿ ಭಾಗವಹಿಸಿರಿ........!

## ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಕೇಂದ್ರ ಕಛೇರಿ : ಶ್ರೀ ಜಯಚಾಮರಾಜೇಂದ್ರ ರಸ್ತೆ,
ತುಮಕೂರು-572 101 ಫೋನ್ ನಂ. 74514

ಅಶೋಕ ನಗರ ಶಾಖೆ : ಸರ್ಕಾರಿ ಕಾಲೇಜ್ ಮುಂಭಾಗ, ತುಮಕೂರು.
ಗುಬ್ಬಿ ಶಾಖೆ : ಜವಳಿಪೇಟೆ, ಬಸ್ ನಿಲ್ದಾಣದಬಳಿ, ಗುಬ್ಬಿ.

ಎಲ್ಲರಲ್ಲೂ ಉಳಿತಾಯ ಹಾದಿಗಾಗಿ ಸದವಕಾಶವನ್ನು ನಿವೇದಿಸುವುದು.

ನಮ್ಮ ಯೋಜನೆಗಳು : ಮಕ್ಕಳ ಕಲ್ಯಾಣ ನಿಧಿ, ಸ್ವರ್ಣಗೌರಿ ನಿಧಿ, ನಿಶ್ಚಿತ ಠೇವಣಿ, ಉಳಿತಾಯ ಖಾತೆ, ಕ್ಯುಮುಲೇಟಿವ್ ಡಿಪಾಜಿಟ್, ವರಲಕ್ಷ್ಮಿ ಕ್ಯಾಷ್ ಸರ್ಟಿಫಿಕೇಟ್, ಮಹೇಶ್ವರ ನಿತ್ಯನಿಧಿ (ಪಿಗ್ಮಿಯೋಜನೆ) ವಿಶ್ರಾಂತಿ ಯೋಜನೆ, ಸಿದ್ಧಗಂಗಾ ಭವಿಷ್ಯ ನಿಧಿ ಯೋಜನೆ, ಗಿಫ್ಟ್ ಚೆಕ್ ಯೋಜನೆ.

ಬ್ಯಾಂಕ್ ಠೇವಣಿದಾರರಿಗೆ ರಕ್ಷಣೆ

## ಡಿಪಾಜಿಟ್ ಇನ್ಸೂರೆನ್ಸ್ ಕಾರ್ಪೊರೇಷನ

ಠೇವಣಿ ವಿಮಾಯೋಜನೆಯ ಪ್ರಕಾರ ಪ್ರತಿಯೊಬ್ಬ ಠೇವಣಿದಾರರ ರೂ. 1,00,000-00 ವರೆಗಿನ ಬ್ಯಾಂಕಿನ ಠೇವಣಾತಿಗಳನ್ನು ಡಿಪಾಜಿಟ್ ಇನ್ಸೂರೆನ್ಸ್ ಕಾರ್ಪೊರೇಷನ್ ಸಂಪೂರ್ಣವಾಗಿ ರಕ್ಷಿಸುತ್ತದೆ.

ನಿಮ್ಮ ಎಲ್ಲಾ ಬ್ಯಾಂಕಿನ ವ್ಯವಹಾರಗಳಿಗೆ ಒಮ್ಮೆ ಭೇಟಿಕೊಡಿ

ಜಿ. ಬಿ. ಪ್ರಸನ್ನಕುಮಾರ್ ಕೆ. ಎಸ್. ಮಂಜುನಾಥ್
ಅಧ್ಯಕ್ಷರು ಉಪಾಧ್ಯಕ್ಷರು

ಕೆ. ಜಿ. ಗಟ್ಟಪ್ಪ
ಕಾರ್ಯನಿರ್ವಾಹಕ ನಿರ್ದೇಶಕರು

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ, ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

ಹೋಟೆಲ್
ಶ್ರೀ ನಂಜುಂಡೇಶ್ವರ
ಊಟ, ವಸತಿ ಮತ್ತು ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ
8597, 2373, 2577




Hotel Shree Nanjundeswara

ಶ್ರೀ ನಂಜುಂಡೇಶ್ವರ
ಬೇಕರಿ
ತುಮಕೂರು ಜಿಲ್ಲೆಯ ಪ್ರಖ್ಯಾತ ಬೇಕರಿ
ಚಿಕ್ಕಪೇಟೆ ತುಮಕೂರು.।
ದೂರವಾಣಿ : 8077




ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ : 2677

ಸಿ.ವಿ. ಮಹದೇವಯ್ಯ
ಮ್ಯಾನೇಜಿಂಗ್ ಪಾರ್ಟನರ್
ಮನೆ ಫೋ. 2477

ಶ್ರೀ ನಂಜುಂಡೇಶ್ವರ ಸ್ವೀಟ್ಸ್
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.।
ದೂರವಾಣಿ : 2077

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.